ಸ್ತ ಪ್ರವೇಶ
—ಡಾ|| ಸಿ. ಎನ್. ಶ್ರೀನಿವಾಸ ಅಯ್ಯಂಗಾರ್
ರೋಗರುಜಿನಗಳು—ಜಿ. ಹನುಮಂತರಾವ್
ಆರ್. ಸುಬ್ಬರಾವ್
೦—ಎಚ್. ಸುಬ್ಬಾಜೋಯಿಸ್
ಗಳು—ಜಿ. ಎನ್. ಕೃಷ್ಣಮೂರ್ತಿ
ೃಸ—ಎಸ್. ವಿ. ರಂಗಣ್ಣ
ಹರಿಹರ—ಡಿ. ಎಲ್. ನರಸಿಂಹಾಚಾರ್
ಂತ್ಯ—ಕೆ. ವೆಂಕಟರಾಮಪ್ಪ
ಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್
. ನಂ. ಶ್ರೀಕಂಠಯ್ಯ
ನ—ಎ. ನಾರಾಯಣರಾವ್
—ಡಾ|| ಎನ್. ಎಸ್. ನಾರಾಯಣಶಾಸ್ತ್ರೀ
ನಾ. ಕಸ್ತೂರಿ
ರ್ಥಿಕದೃಷ್ಟಿ—ಎಸ್. ಗೋಪಾಲಸ್ವಾಮಿ
ಣ—ಕೆ. ಶೇಷಾದ್ರಿ ಅಯ್ಯಂಗಾರ್
. ಎಸ್. ಸುಬ್ಬರಾಯ
ಕಾದಂಬರಿ—ವಿ. ಸೀತಾರಾಮಯ್ಯ
ಕಾವ್ಯಗಳು—ಎಸ್. ರಾಮಚಂದ್ರರಾವ್
ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥ
ಸ್ತು ಅದರ ರಕ್ಷಣೆ—ಡಿ. ಶಾಮಣ್ಣ
ಕ ವೆಚ್ಚ—ಡಾ|| ಎಂ. ಎಚ್. ಗೋಪಾಲ್

ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ—೯೨

# ಹಿಂದೂಧರ್ಮಸಾರ



ಸೋಮನಾಥಾನಂದ




ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೫೯

ಮೊದಲನೆಯ ಮುದ್ರಣ ೧೯೫೯
೩೦೦೦ ಪ್ರತಿಗಳು



ಬೆಲೆ
ಸಾದಾ ಪ್ರತಿ ೨೫ ನಯೆ ಪೈಸೆ
ಉತ್ತಮ ಪ್ರತಿ ೩೭ ನಯೆ ಪೈಸೆ

ಮುದ್ರಕರು :
ಮೈಸೂರು ಯೂನಿವರ್ಸಿಟಿ ಮುದ್ರಣಾಲಯ
ವಿ. ವಿ. ಮೊಹಲ್ಲ, ಮೈಸೂರು

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಇಪ್ಪತ್ತೈದು ವರ್ಷಗಳಾಗಿವೆ. ಈ ಅವಧಿಯಲ್ಲಿ ೯೧ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರುಹೊತ್ತಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೊ ತ್ರಿಗುಣವೊ ಆಗಿರಬೇಕಾಗಿತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನೂ ಅವು ಮಾರಾಟವಾಗುತ್ತಿರುವ ವೇಗವನ್ನೂ ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರಿ ಮುದ್ರಿತವಾಗಿದೆ. ದಿನೇ ದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. "ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ? ಮುಗಿದು ಹೋಗಿರುವ ಪುಸ್ತಿಕೆಗಳು ಅಚ್ಚಾಗಿವೆಯೆ?" ಎಂದು ಮೇಲಿಂದ ಮೇಲೆ ಜನ ಕೇಳುತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ; ನಾಡಿನ ಪ್ರಗತಿಯ ಒಂದು ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ ಮಹತ್ತಾದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿಗಾಗಿ ಸಾಧನವೇ ಹೊರತು ಅದೇ ಪರಮ ಗುರಿಯಲ್ಲ; ಜ್ಞಾನ ಸಂಪಾದನೆಯೇ ಅದರ ಪರಮ ಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲತೆಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯದಂಥ ಸಂಸ್ಥೆಗಳ ಆದ್ಯಕರ್ತವ್ಯ. ಈ ಮೂಲಕ ವಿಶ್ವ

ವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆಮೂಲೆಗೆಲ್ಲ ಹರಿದು, ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನಪ್ರಸಾರ ಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರುವಂತೆಯೆ ಕನ್ನಡ ದಲ್ಲಿ ವಿಜ್ಞಾನ ಸಂಬಂಧವಾದ ವಿಷಯಗಳನ್ನು ಸುಲಭವಾಗಿ ಸರಳವಾಗಿ ಹೇಳಬಹುದು, ಮತ್ತು ಕನ್ನಡ ವೈಜ್ಞಾನಿಕ ಭಾಷೆ ಯಾಗಬಲ್ಲುದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಪುಸ್ತಿಕೆಗಳ ಪಟ್ಟಿಯನ್ನೊಮ್ಮೆ ಓದಿದರೆ ಸಂದೇಹವಾದಿಗಳ ಶಂಕೆ ಸಂಪೂರ್ಣವಾಗಿ ನಿವಾರಣೆಗೊಂಡು ಧೈರ್ಯ ಮೂಡದಿರದು. ಇವುಗಳಲ್ಲಿ ೬೪ ಪುಸ್ತಿಕೆಗಳು ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ಸಮಾಜ ವಿಜ್ಞಾನ, ವೈದ್ಯ ವಿಜ್ಞಾನ, ಗಣಿತ ವಿಜ್ಞಾನ, ಇತಿಹಾಸ ಮೊದಲಾದುವುಗಳಿಗೆ ಸಂಬಂಧಿಸಿದವು. ಉಳಿದ ೨೭ ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದುವು. ಇವುಗಳ ಗ್ರಂಥಕರ್ತರು ಪ್ರಮುಖವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳ ಕಾಲ ಪಾಠ ಹೇಳಿ ನುರಿತಿರುವ ಘನ ವಿದ್ವಾಂಸರು. ಬಹಳ ಹಿಂದೆಯೇ ವೈಜ್ಞಾನಿಕ ಗ್ರಂಥಗಳ ರಚನೆಗೆ ಕೈಹಾಕಿ ಕನ್ನಡ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯವನ್ನು ಪಡೆದಿದೆ, ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣಮಾಧ್ಯಮವಾಗುವ ಶಕ್ತಿ ಯನ್ನು ಪಡೆದಿದೆ ಎಂದು ತೋರಿಸಿಕೊಟ್ಟಿದ್ದಾರೆ. ಅವರೆಲ್ಲ ಅಭಿನಂದನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು, ವಿಸ್ತಾರಗೊಂಡು ಪುಸ್ತಕಗಳ ಸಂಖ್ಯೆ ದಿನೇ ದಿನೇ ಬೆಳೆಯಬೇಕೆಂದೂ, ಇದರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿ

ಪ್ರಜ್ಞೆ ಸರ್ವತೋಮುಖವಾಗಿ ವಿಕಾಸಗೊಳ್ಳಬೇಕೆಂಬುದೂ ವಿಶ್ವವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ ಶಕಮುಹೂರ್ತದಲ್ಲಿ ಕನ್ನಡನುಡಿ ಆಡಳಿತದ ಭಾಷೆಯಾಗಿ, ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ, ಜನತೆಯ ಸಂಸ್ಕೃತಿವಿಕಾಸಸಾಧನದ ಭಾಷೆಯಾಗಿ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾನಿಲಯದ ಈ ಸೇವೆಯನ್ನು ಕರ್ನಾಟಕ ಸಂಪೂರ್ಣವಾಗಿ ತನ್ನ ಮೇಲ್ಮೆಗೂ ಏಳ್ಗೆಗೂ ಬಳಸಿಕೊಳ್ಳುತ್ತದೆಂದು ನಾವು ಹಾರೈಸುತ್ತೇವೆ.

ಮೈಸೂರು
೮—೧೨—೧೯೫೫

ಕೆ. ವಿ. ಪುಟ್ಟಪ್ಪ
ವೈಸ್-ಛಾನ್ಸಲರ್.

# ವಿಷಯಾನುಕ್ರಮಣಿಕೆ

# ಹಿಂದೂಧರ್ಮಸಾರ

## ೧

## ಪೀಠಿಕೆ

ಹಿಂದೂಧರ್ಮ ಎಂಬ ಪದವನ್ನು ಎಲ್ಲಿಯವರೆಗೆ ವಿವರಿಸಲು ಯತ್ನಿಸುವುದಿಲ್ಲವೋ ಅಲ್ಲಿಯವರೆಗೆ ಅದಕ್ಕೆ ಅರ್ಥ ನಮಗೆ ಗೊತ್ತಿದೆ ಎಂದು ಭಾವಿಸುವೆವು. ಆದರೆ ಅದನ್ನು ಸ್ವಲ್ಪ ವಿವರಿಸಿ ಎಂದರೆ ಆಗ ಮಾತ್ರ ಅದರ ಕಷ್ಟ ಗೊತ್ತಾಗುವುದು. ಇತರ ಧರ್ಮಗಳಂತೆ ಇದನ್ನು ಅಷ್ಟು ಸುಲಭವಾಗಿ ವಿವರಿಸಲಾಗುವುದಿಲ್ಲ. ಕ್ರೈಸ್ತಧರ್ಮ ಎಂದರೆ ಕ್ರಿಸ್ತನ ಜೀವನ ಮತ್ತು ಸಂದೇಶದ ಮೇಲೆ ನಿಂತಿರುವ ಧರ್ಮ ಎನ್ನುವರು. ಬೌದ್ಧಧರ್ಮ ಎಂದರೆ ಬುದ್ಧನ ಜೀವನ ಮತ್ತು ಅವನ ಸಂದೇಶದ ಮೇಲೆ ನಿಂತಿರುವುದು ಎನ್ನುವರು. ಮಹಮ್ಮದೀಯ ಧರ್ಮ ಎಂದರೆ ಮಹಮ್ಮದನ ಜೀವನ ಮತ್ತು ಸಂದೇಶದ ಮೇಲೆ ನಿಂತಿರುವುದು ಎನ್ನುವರು. ಆ ದೃಷ್ಟಿಯಿಂದ ಹಿಂದೂಧರ್ಮದ ವಿವರಣೆ ಕೊಡಲು ಪ್ರಯತ್ನ ಮಾಡಿದಾಗ ನಮಗೆ ಅದರ ಜಟಿಲತೆ ಗೊತ್ತಾಗುವುದು. ಹಿಂದೂಧರ್ಮ ಯಾವುದೋ ಒಬ್ಬ ಮಹಾಪುರುಷನ ಜೀವನ ಮತ್ತು ಉಪದೇಶದ ಮೇಲೆ ನಿಂತ ಧರ್ಮವಲ್ಲ. ಇಲ್ಲಿ ಇರುವ ಮಹಾಪುರುಷರು ಮತ್ತು ಅವತಾರ ವ್ಯಕ್ತಿಗಳು ಅನಂತವಾಗಿದ್ದಾರೆ. ಹಾಗೆಯೇ ಅವರ ಸಂದೇಶವೂ ಅನಂತವಾಗಿವೆ. ಇವುಗಳಲ್ಲಿ ಯಾವುದನ್ನಾದರೂ ಒಂದನ್ನು ಹಿಡಿದುಕೊಂಡರೂ ಅವನು ಹಿಂದೂ. ಇಲ್ಲಿ ಒಂದು ವ್ಯಕ್ತಿಯಲ್ಲ ಇರುವುದು, ವ್ಯಕ್ತಿಗಳ ಸಮುದಾಯ. ಒಂದು ಸಂದೇಶವಲ್ಲ

ಇರುವುದು, ಸಂದೇಶದ ಪರಂಪರೆ. ಇಲ್ಲಿ ಒಂದು ತತ್ತ್ವವಲ್ಲ ಇರುವುದು, ಎಲ್ಲಾ ತತ್ತ್ವಗಳನ್ನೊಳಗೊಂಡ ಅನಂತ ಸಾಗರ. ಆದಕಾರಣ ಹಿಂದೂಧರ್ಮವನ್ನು ತಿಳಿದುಕೊಳ್ಳಬೇಕಾದರೆ ಇತರ ಧರ್ಮಗಳಷ್ಟು ಸುಲಭವಲ್ಲ, ಸರಳವಲ್ಲ. ಇದೊಂದು ತತ್ತ್ವ ಸ್ತೋಮ. ಮಹಾವ್ಯಕ್ತಿಗಳ ಪ್ರದರ್ಶನಾಲಯ. ಹಲವು ಬಗೆಯ ಶಾಸ್ತ್ರಗಳು, ತತ್ತ್ವಗಳು, ಇಂತಹ ವಿದ್ಯುದ್ದೀಪಗಳಿಂದ ಅಲಂಕೃತವಾದ ಮಹಾಮಂದಿರ. ದೇವರನ್ನು ಯಾವ ಹೆಸರಿನಿಂದ ಬೇಕಾದರೂ ಕರೆಯಬಹುದು. ಅಥವಾ ಅವನನ್ನು ಕೇವಲ "ಅದು" ಎಂದು ಬೇಕಾದರೂ ಕರೆಯಬಹುದು. ತನಗಿಂತ ಬಾಹ್ಯದಲ್ಲಿರುವ ದೇವರನ್ನು ನಂಬಬಹುದು. ಇಲ್ಲವೇ ತಾನೇ ಬ್ರಹ್ಮ ಎಂತಲೂ ನಂಬಬಹುದು. ದೇವಸ್ಥಾನ, ವಿಗ್ರಹ, ವ್ರತ ಆಚಾರಾದಿಗಳನ್ನು ಇಟ್ಟುಕೊಂಡಿರುವ ಹಿಂದೂಗಳಿರುವರು. ಅದನ್ನೆಲ್ಲಾ ಬಿಟ್ಟವರೂ ಇರುವರು. ಆದರೂ ಅವರು ತಾವು ಹಿಂದೂಗಳು ಎಂದು ಕರೆದುಕೊಳ್ಳುವರು. ಬೇಕಾದರೆ ವಿಗ್ರಹಾರಾಧನೆ ಮಾಡಬಹುದು ಬಿಟ್ಟರೆ ಬಿಡಬಹುದು. ದೇವರಿಗೆ ನಾಮ ರೂಪಗಳನ್ನು ಬೇಕಾದರೆ ಆರೋಪ ಮಾಡಬಹುದು. ಧೈರ್ಯವಿದ್ದರೆ, ಶಕ್ತಿಯಿದ್ದರೆ, ಅವನನ್ನು ನಿರಾಕಾರವಾಗಿ ಬೇಕಾದರೂ ಉಪಾಸನೆ ಮಾಡಬಹುದು. ಹಿಂದೂಧರ್ಮ ಒಂದು ಬೃಹದ್ಧರ್ಮ. ಅನಂತ ಶಾಖೋಪಶಾಖೆಗಳಿಂದ ಕೂಡಿ ಸಾವಿರಾರು ಎಕರೆಗಳಷ್ಟು ವಿಸ್ತಾರವಾಗಿ ಹಬ್ಬಿರುವ ಒಂದು ಮಹಾ ವಟವೃಕ್ಷದಂತಿದೆ. ಈ ವಿರಾಟ್ ಧರ್ಮವನ್ನು ತಿಳಿದುಕೊಳ್ಳುವ ಅಲ್ಪ ಪ್ರಯತ್ನ ಈ ಲೇಖನ.

ಮೊದಲನೆಯದಾಗಿ ಈ "ಹಿಂದು" ಎಂಬ ಪದೋತ್ಪತ್ತಿಯೇ ವಿಚಿತ್ರವಾಗಿದೆ. ಹಿಂದೂಗಳ ನಿಜವಾದ ಹಿಂದಿನ

ಹೆಸರು ಆರ್ಯರು. ಭರತಖಂಡದ ಪೂರ್ವದ ಹೆಸರು ಆರ್ಯಾವರ್ತ. ಅವರ ಆಗಿನ ಧರ್ಮ ಆರ್ಯಧರ್ಮ. ಹೇಗೋ ಕಾಲಕ್ರಮೇಣ "ಹಿಂದೂ" ಎಂಬ ನಾಮಕರಣ ನಮಗೆ ಆಗಿ ಹೋಗಿದೆ. ಸ್ವಾಮಿ ವಿವೇಕಾನಂದರು ಈ ಪದೋತ್ಪತ್ತಿಯ ವಿಚಾರವಾಗಿ ಮಾತನಾಡುತ್ತಾ ಈ ಪದ "ಸಿಂಧೂ" ಎಂಬ ಪದದಿಂದ ಬಂದಿದೆ ಎನ್ನುವರು. ಹಿಂದಿನ ಕಾಲದಲ್ಲಿ ಪಾರ್ಸಿಗಳು ಸಿಂಧೂ ನದಿಯ ಪೂರ್ವಕ್ಕೆ ಇದ್ದ ಜನರನ್ನು ಸಿಂಧೂಗಳು ಎಂದು ಕರೆದರು. ಅನಂತರ ಅದು ಬಳಕೆಯಲ್ಲಿ "ಹಿಂದೂ" ಆಯಿತು. ಕಾಲಕ್ರಮೇಣ ಮಹಮ್ಮದೀಯ ಮುಂತಾದ ನಾಗರಿಕತೆಯ ಸಂಘರ್ಷಣೆಯ ಪರಿಣಾಮವಾಗಿ "ಹಿಂದೂ" ಎಂಬ ಪದ ನಮಗೆ ಅಂಟಿಕೊಂಡಿದೆ. ಈ ಜನಾಂಗ ಯಾವ ಧರ್ಮವನ್ನು ಅನುಸರಿಸುತ್ತದೆಯೋ ಅದನ್ನು ಹಿಂದೂಧರ್ಮ ಎನ್ನುವರು.

ಧರ್ಮ ಎನ್ನುವ ಪದ ಧೃ ಎಂಬ ಸಂಸ್ಕೃತ ಪದದಿಂದ ಬಂದಿದೆ. ಧೃ ಎಂದರೆ ಎತ್ತಿ ಹಿಡಿದಿರುವುದು ಎಂದು ಅರ್ಥ. ಮಾನವನನ್ನು ಎತ್ತಿ ಹಿಡಿದಿರುವುದಾವುದು? ಅದೇ ಸತ್ಯ, ಋತ. ಅವನನ್ನು ಕಾಪಾಡುತ್ತಿರುವುದೇ ಇದು. ಧರ್ಮ ನಮ್ಮನ್ನು ಕಾಪಾಡುತ್ತದೆ, ನಾವು ಧರ್ಮವನ್ನು ಕಾಪಾಡಬೇಕು ಎಂದು ಹಿಂದಿನವರು ಹೇಳುತ್ತಿದ್ದರು. ಹಿಂದೂಗಳು ಸನಾತನಧರ್ಮದ ಮೂಲ ತತ್ತ್ವವನ್ನು ಹಿಡಿದುಕೊಂಡು ಪ್ರಪಂಚದಲ್ಲಿ ತಮ್ಮ ಪಾಲಿನ ಕರ್ತವ್ಯವನ್ನು ಮಾಡುತ್ತಿರುವರು. ಎಲ್ಲಿಯವರೆಗೆ ಆ ನಂಬಿಕೆಯನ್ನು ಈ ಜನಾಂಗ ಬಿಡುವುದಿಲ್ಲವೋ ಅಲ್ಲಿಯವರೆಗೆ ಈ ಧರ್ಮ ನಾಶವಾಗಲಾರದು. ಎಂದು ಆ ನಂಬಿಕೆಯನ್ನು ಬಿಡುವುದೋ ಆಗ ಈ ಧರ್ಮದ ಅಳಿಗಾಲ ಸನ್ನಿಹಿತವಾಯಿತು ಎನ್ನಬಹುದು.

ಮಕ್ಕಳು ಒಂದು ಕಂಬವನ್ನು ಭದ್ರವಾಗಿ ಹಿಡಿದುಕೊಂಡು ಸುತ್ತುತ್ತಾ ಇದ್ದರೆ ಬೀಳುವ ಅಪಾಯ ಇರುವುದಿಲ್ಲ. ಯಾವಾಗ ಸುತ್ತುವ ಭರದಲ್ಲಿ ಕಂಬದ ಮೇಲಿನ ಕೈ ಜಾರುವುದೋ ಆಗ ಮಗು ಬಿದ್ದು ಹೋಗುವುದು. ಅದರಂತೆಯೇ ಹಿಂದೂಗಳಿಗೆಲ್ಲಾ ಅವರು ಯಾವ ಜಾತಿಗೆ ಸೇರಿರಲಿ, ಕೋಮಿಗೆ ಸೇರಿರಲಿ, ಭದ್ರವಾಗಿ ಹಿಡಿದುಕೊಂಡಿರುವ ಒಂದು ಕಂಬವಿದೆ. ಅದೇ ಪ್ರಪಂಚದಲ್ಲಿ ಶಾಶ್ವತವಾಗಿರುವ ಸತ್ಯವೆಂಬ ಭಗವಂತನಲ್ಲಿ ದೃಢ ನಂಬಿಕೆ. ಆ ದೈವೀಶಕ್ತಿ ಈ ಪ್ರಪಂಚವನ್ನೆಲ್ಲಾ ಆಳುತ್ತಿದೆ. ಯಾರೂ ಅದರ ಕಣ್ಣಿಗೆ ಮಣ್ಣು ಹಾಕಲಾರರು. ಯಾರು ಆ ಪರಾತ್ಪರಶಕ್ತಿಯನ್ನು ನಂಬಿ ತಮ್ಮ ಬಾಳನ್ನು ಹದಗೊಳಿಸಿ ಅವನೆಡೆಗೆ ಹೋಗಲು ಯತ್ನಿಸುವರೋ ಅವರಿಗೆ ಭಗವಂತನ ಶಕ್ತಿ ಸಹಾಯಕ್ಕೆ ಬರುವುದು ಅರಿವಾಗುವುದು. ಯಾರು ಆ ಸತ್ಯಪಥವನ್ನು ಬಿಟ್ಟು ಕೇವಲ ಪ್ರಾಪಂಚಿಕ ಸುಖವನ್ನು ಮಾತ್ರ ಮೆಲ್ಲಲು ಯತ್ನಿಸುವರೋ ಅವರ ಬಾಳು ದುಃಖದಲ್ಲಿ ಪರ್ಯವಸಾನವಾಗುವುದು. ಪ್ರಪಂಚದಲ್ಲಿ ಗೆಲ್ಲುವುದು ಸತ್ಯವೊಂದೇ, ಅಸತ್ಯವಲ್ಲ ಎಂಬುದನ್ನು ಮನುವಿನ ಕಾಲದಿಂದ ನಾವು ಕೇಳುತ್ತಿರುವೆವು. ಭಗವಂತನೆಡೆಗೆ ಹೋಗುವ ದಾರಿಯೂ ಸತ್ಯಪಥವೇ. ಆ ಮೂಲ ಚೈತನ್ಯವನ್ನು, ಶಕ್ತಿಯನ್ನು, ಯಾರು ತಮಗೆ ಯಾವ ರೀತಿ ಕರೆಯಲು ಆಸೆಯೋ ಹಾಗೆ ಕರೆಯಬಹುದು. ಬಹಳ ಪುರಾತನವಾದ ಋಗ್ವೇದವಲ್ಲಿ ಬರುವ ಸಂದೇಶವೂ ಇದೇ : "ಏಕಂ ಸತ್ ವಿಪ್ರಾ ಬಹುಧಾ ವದಂತಿ". ಯಾವ ಹಿಂದೂಗಳೂ ಇತರ ಧರ್ಮವನ್ನು ದೂರುವುದಿಲ್ಲ. ಇತರರು ಸೈತಾನನ್ನು ಪೂಜಿಸುತ್ತಿರುವರು ಎನ್ನುವುದಿಲ್ಲ. ಧರ್ಮಗಳೆಲ್ಲಾ ಒಂದೇ ಸತ್ಯದೆಡೆಗೆ ಹೋಗುವ ವಿವಿಧ

ಪಥಗಳು. ಯಾವ ಒಂದು ಧರ್ಮವೂ ಮೇಲಲ್ಲ. ಯಾವ ಧರ್ಮವೂ ಕೀಳಲ್ಲ. ಎಲ್ಲಾ ಧರ್ಮಗಳಲ್ಲಿಯೂ ಕಾಲಕ್ರಮೇಣ ಕಸ ತುಂಬುವುದು. ಅದನ್ನು ಕಾಲಕಾಲಕ್ಕೆ ಪ್ರತಿಯೊಂದು ಧರ್ಮದವರೂ ಗುಡಿಸುತ್ತಿರಬೇಕು. ಅದಕ್ಕಾಗಿ ಸಾಧು ಸಂತರು ಪ್ರತಿಯೊಂದು ಧರ್ಮದಲ್ಲಿಯೂ ಅವತಾರ ಮಾಡುವರು. ಸತ್ಯ ಒಂದು, ಬಲ್ಲವರು ಅದನ್ನು ಹಲವು ಹೆಸರಿನಿಂದ ಕರೆಯುವರು ಎನ್ನುವರು. ಇದು ಹೇಗೆ ಪ್ರತಿಯೊಬ್ಬ ಹಿಂದೂವಿನ ಧಮನಿಯಲ್ಲಿ ಹರಿಯುತ್ತಿದೆಯೋ ಹಾಗೆಯೇ ಅನ್ಯಮತ ಸಹಿಷ್ಣುತೆಯ ಭಾವನೆ ಕೂಡ ಹರಿಯುತ್ತಿದೆ. ಪ್ರಪಂಚದ ಮತ್ತಾವ ಧರ್ಮದಲ್ಲಿಯೂ ಇಂತಹ ಔದಾರ್ಯವನ್ನು ನೋಡಲಾರೆವು. ಈ ಔದಾರ್ಯಕ್ಕೆ ಕಾರಣ ಹಿಂದೂಧರ್ಮದ ವಿಶಾಲವಾದ ತತ್ತ್ವ.

ಯಾವ ಧರ್ಮವನ್ನು ತೆಗೆದುಕೊಂಡರೂ ಅದರಲ್ಲಿ ಮೂರು ಭಾಗಗಳನ್ನು ನೋಡುತ್ತೇವೆ. ಅವೇ ತತ್ತ್ವ, ಪುರಾಣ, ಆಚಾರ. ಪ್ರತಿಯೊಂದು ಧರ್ಮದಲ್ಲಿಯೂ ತತ್ತ್ವಕ್ಕೆ ಸೇರಿದ ಅಂಶಗಳಿವೆ. ಪುರಾಣ ಅಥವಾ ಕಥೆಗೆ ಸೇರಿದ ಅಂಶಗಳಿವೆ. ಆಚಾರ ಅಥವಾ ನಮ್ಮ ನಿತ್ಯಜೀವನ ಅಥವಾ ವಿಶೇಷ ಜೀವನಕ್ಕೆ ಸಂಬಂಧಪಟ್ಟ ವಿಷಯಗಳಿವೆ. ಇವುಗಳಲ್ಲಿ ತತ್ತ್ವವೊಂದೇ ಇದ್ದರೆ ಸಾಕಲ್ಲ; ಪುರಾಣ ಆಚಾರಗಳೆಲ್ಲಾ ಏತಕ್ಕೆ ಇರಬೇಕು ಎಂದು ನಾವು ವಾದಿಸಬಹುದು. ಆದರೆ ತತ್ತ್ವವೊಂದೇ ಇರಲು ಸಾಧ್ಯವಿಲ್ಲ. ತತ್ತ್ವ ತಿರುಳಿನಂತೆ. ನಾವು ತಿನ್ನುವಾಗ ಅದನ್ನು ತಿಂದರೂ ಬರೀ ತಿರುಳುಮಾತ್ರ ನಮಗೆ ಪ್ರಪಂಚದಲ್ಲಿ ಸಿಕ್ಕುವುದಿಲ್ಲ. ತೆಂಗಿನಕಾಯನ್ನು ತೆಗೆದುಕೊಳ್ಳೋಣ. ನಾವು ತಿನ್ನುವಾಗ ಬರೀ ತಿರುಳನ್ನು ತಿಂದರೂ ಆ ತಿರುಳು ಬೆಳೆಯಬೇಕಾದರೆ

ಅದರ ಸುತ್ತಲೂ ಕರಟ ಇರಬೇಕು. ಅದರ ಮೇಲೆ ತೆಂಗಿನ ಮೊಟ್ಟೆಯೂ ಇರಬೇಕು.

ಪ್ರತಿಯೊಂದು ಧರ್ಮದಲ್ಲಿಯೂ ಮುಖ್ಯವಾಗಿರುವ ವಸ್ತು ತತ್ತ್ವ. ಅದೇ ತಿರುಳು. ಆದರೆ ತತ್ತ್ವವನ್ನೇ ತಿಳಿದುಕೊಳ್ಳ ಬಲ್ಲಂತಹ ಜನ ಯಾವಾಗಲೂ ಅತಿ ವಿರಳ. ತತ್ತ್ವ ಬಹಳ ಗಹನವಾದುದು, ಸೂಕ್ಷ್ಮವಾದುದು. ಬುದ್ಧಿಶಕ್ತಿ ಚೆನ್ನಾಗಿ ಪಳಗಿದ ಮೇಲೆ, ಅದು ಶುದ್ಧವಾದ ಮೇಲೆ ಮಾತ್ರ ತತ್ತ್ವವನ್ನು ತಿಳಿದುಕೊಳ್ಳಲು ಸಾಧ್ಯ. ಆದರೆ ತತ್ತ್ವ ವಿಚಾರವಂತರಿಗೆ ಮಾತ್ರವಲ್ಲ, ವಿಚಾರ ಅಷ್ಟು ಪ್ರಬುದ್ಧವಾಗದವರಿಗೂ ಬೇಕು. ತತ್ತ್ವವನ್ನು ಸಾಧಾರಣ ಜನರೂ ತಿಳಿಯುವಂತೆ ಮಾಡಬೇಕು. ಯಾವುದು ತುಂಬಾ ಸೂಕ್ಷ್ಮವಾಗಿದೆಯೋ, ತಾತ್ತ್ವಿಕರ ಕಣ್ಣಿಗೆ ಮಾತ್ರ ಗೋಚರವಾಗುವುದೋ, ಅದನ್ನು ಜೀವಂತವಾಗಿ ನಮ್ಮ ಕಣ್ಣುಮುಂದೆ ಬಂದು ನಿಲ್ಲುವಂತೆ ಮಾಡಬೇಕು. ಅದಕ್ಕಾಗಿ ತತ್ತ್ವದ ಸುತ್ತಲೂ ಕಥೆ ಬೆಳೆಯುವುದು. ಅದನ್ನು ಪುರಾಣ ಮತ್ತು ಇತಿಹಾಸವಲ್ಲಿ ನೋಡುತ್ತೇವೆ. ಅಲ್ಲಿ ಬರುವ ಕಥೆಗಳಲ್ಲಿ ರಾಮನ ಆದರ್ಶ, ಸೀತೆಯ ಆದರ್ಶ ಮುಂತಾದುವನ್ನು ನೋಡುವಾಗ, ಸತ್ಯ, ಕರ್ತವ್ಯನಿಷ್ಠೆ, ಧರ್ಮ, ಮುಂತಾದುವು ಅರ್ಥವಾಗದೇ ಇದ್ದರೂ ಯಾರ ಬಾಳಿನಲ್ಲಿ ಈ ಆದರ್ಶಗಳು ಅವರ ಜೀವನದ ಉಸಿರಾಗಿತ್ತೋ ಅಂತಹ ಶೀಲಗಳನ್ನು ಕೇಳಿ ದಾಗ ನಮಗೆ ತಿಳಿಯದ ತತ್ತ್ವ ಪ್ರತ್ಯಕ್ಷವಾಗಿ ಸಾಕಾರವನ್ನು ತಾಳಿ ರಾಮನಂತೆಯೋ ಸೀತೆಯಂತೆಯೋ ನಮ್ಮ ಮುಂದೆ ನಿಂತು ಜೀವನದ ಮೇಲೆ ಅದ್ಭುತ ಪರಿಣಾಮಕಾರಿಯಾಗು ವುದು. ಈಗ ಉದಾಹರಣೆಗೆ ಮಲೇರಿಯಾ ಜ್ವರಕ್ಕೆ ಕೊಡುವ ಕ್ವೈನಾ ಮಾತ್ರೆಯನ್ನು ತೆಗೆದುಕೊಳ್ಳೋಣ. ವೈದ್ಯನಿಗೆ

ಮಲೇರಿಯಾ ಜ್ವರ ಹೇಗೆ ಬರುವುದು ಎನ್ನುವುದು ಗೊತ್ತು. ಕ್ವೈನಾ ಮಾತ್ರೆಯಲ್ಲಿ ಯಾವ ಗುಣಗಳಿವೆ, ಅವು ರೋಗಿಯ ದೇಹಕ್ಕೆ ಹೋದಾಗ ಯಾವ ಪರಿಣಾಮ ಉಂಟುಮಾಡುತ್ತದೆ ಎನ್ನುವುದೂ ಗೊತ್ತು. ಇವನು ತತ್ತ್ವ ಜ್ಞಾನಿಯಂತೆ. ಒಬ್ಬ ಹುಡುಗ ಮಲೇರಿಯಾ ಜ್ವರದಿಂದ ನರಳುತ್ತಿರುವನು. ಅವನಿಗೆ ಕಹಿ ಔಷಧಿ ಹಿಡಿಸದು. ಸಕ್ಕರೆಯ ಪಾಕದಲ್ಲಿ ಅದ್ದಿದ ಮಾತ್ರೆಯನ್ನು ಅವನಿಗೆ ಕೊಡುವನು. ಮಗು ಸಂತೋಷದಿಂದ ಅದನ್ನು ತೆಗೆದುಕೊಳ್ಳುವುದು. ಕೆಲವುಕಾಲದ ಮೇಲೆ ಅದು ರೋಗದಿಂದ ಪಾರಾಗುವುದು. ಆ ಮಗುವಿಗೆ ತಾನು ತಿಂದ ಸಕ್ಕರೆ ಗುಳಿಗೆಯಲ್ಲಿ ಔಷಧಿ ಇತ್ತು ಎಂಬುದು ಗೊತ್ತಿಲ್ಲ. ಹೊಟ್ಟೆಗೆ ಹೋದಮೇಲೆ ಯಾವರೀತಿ ತನ್ನ ದೇಹದ ಮೇಲೆ ಪರಿಣಾಮವನ್ನು ಉಂಟುಮಾಡುತ್ತದೆ ಎಂಬುದೂ ಗೊತ್ತಿಲ್ಲ. ಆದರೂ ಮಗು ಗುಣಮುಖವಾಗುವುದು. ಅದರಂತೆಯೇ ತತ್ತ್ವವನ್ನೊಳಗೊಂಡ ಕಥೆಗಳು. ಎಲ್ಲಾ ಧರ್ಮದಲ್ಲಿಯೂ ಇಂತಹ ಕಥೆಗಳು ಬೇಕಾದಷ್ಟಿವೆ. ಇವೇನು ನಿಜವಾಗಿ ನಡೆದ ಚಾರಿತ್ರಕ ಘಟನೆಗಳೇ ಎಂತಲೇ ನಾವು ತೆಗೆದುಕೊಳ್ಳಬೇಕಾಗಿಲ್ಲ. ಇವುಗಳಲ್ಲಿ ಚಾರಿತ್ರಕ ಅಂಶಗಳ ಒಂದು ಅಸ್ತಿಪಂಜರ ಇದ್ದರೂ ಇರಬಹುದು. ಅದನ್ನು ಕವಿ ಒಂದು ಸುಂದರ ಕಾವ್ಯಮಾಡಿ ಜನಾದರಣೀಯವಾಗಿ ಮಾಡುತ್ತಾನೆ. ಅವನು ನೀಡುವುದು ಕಥೆಯ ಮೂಲಕ ಒಂದು ಆದರ್ಶ. ಅದು ಕವಿಯ ಒಂದು ದರ್ಶನ. ಜನಜೀವನದ ಮೇಲೆ ಆ ದರ್ಶನ, ಆದರ್ಶ, ಅದ್ಭುತ ಪರಿಣಾಮಕಾರಿಯಾಗುವುದು. ಇದು ಚರಿತ್ರೆಗೂ ಮೀರಿದ ಸತ್ಯವಾಗಿ ನಿಲ್ಲುವುದು. ಭವಜೀವಿಗಳಿಗೆ ಗುರಿ ಗೊತ್ತಿಲ್ಲದೆ ಅಲೆಯುತ್ತಿರುವಾಗ ದಾರಿಯನ್ನು ತೋರುವ ಕೈಮರಗಳಂತಿವೆ.

ಅನಂತರವೇ ಆಚಾರ. ಮತ್ತು ಸ್ಥೂಲವಾಗಿ ಸತ್ಯ ಇದರಲ್ಲಿ ವ್ಯಕ್ತವಾಗುವುದು. ದೇವರಿಗೆ ಒಂದು ಆಕಾರ ಕೊಡುವೆವು. ಅವನನ್ನು ವಿಗ್ರಹದಲ್ಲಿ ಕೆತ್ತುವೆವು. ಅವನಿಗಾಗಿ ಒಂದು ದೇವಾಲಯವನ್ನು ನಿರ್ಮಿಸುವೆವು. ಅವನನ್ನು ಸ್ಥೂಲವಾಗಿ ಪೂಜೆ ಮಾಡುವೆವು, ಆಹಾರಾದಿಗಳನ್ನು ನಿವೇದಿಸುವೆವು. ನಮ್ಮ ಎದುರಿಗೆ ಅವನು ನಿಂತಿರುವನೋ ಏನೋ ಎಂದು ಹಲವು ವಿಧವಾದ ಸೇವೆಗಳನ್ನು ಮಾಡುವೆವು. ಆಚಾರ ಇಲ್ಲಿ ಮಾತ್ರವಲ್ಲ ಇರುವುದು; ಹಿಂದೂಗಳ ಬಾಳಿನಲ್ಲೆಲ್ಲಾ ಆಚಾರ ಹಾಸು ಹೊಕ್ಕಾಗಿ ಹೋಗಿದೆ. ಹೆಜ್ಜೆಹೆಜ್ಜೆಗೆ ಆಚಾರ. ಬೆಳಗ್ಗೆ ದೇವರ ಹೆಸರನ್ನು ಹೇಳಿಕೊಂಡು ಕಣ್ಣು ಬಿಡುವುದರಿಂದ ಆಚಾರ ಪ್ರಾರಂಭವಾಗಿ, ರಾತ್ರಿ ದೇವರ ಹೆಸರನ್ನು ಹೇಳಿಕೊಂಡು ಕಣ್ಣುಮುಚ್ಚಿಕೊಳ್ಳುವ ತನಕ ಆಚಾರಮಯವಾಗಿದೆ ಹಿಂದುವಿನ ಬಾಳು. ಭ್ರೂಣಸ್ಥಿತಿಯಲ್ಲಿ ತಾಯಿಯ ಗರ್ಭದಲ್ಲಿ ಬೀಳುವಾಗ ಆಚಾರ ಗರ್ಭಾದಾನ ಮಂತ್ರದಿಂದ ಪ್ರಾರಂಭವಾಗಿ ಸೀಮಂತ, ನಾಮಕರಣ, ವಿದ್ಯಾಭ್ಯಾಸ, ಉಪನಯನ, ಮದುವೆ ಮೂಲಕ ಸಾಗಿ, ನಾವು ಕಣ್ಣುಮುಚ್ಚಿಕೊಂಡು ದೇಹ ಭಸ್ಮೀಭೂತವಾಗುವವರೆಗೆ ಆಚಾರಗಳೂ ಮಂತ್ರಗಳೂ ಲೆಕ್ಕವಿಲ್ಲದಷ್ಟು ತುಂಬಿವೆ. ಆದಕಾರಣವೇ ಕೆಲವು ಪಾಶ್ಚಾತ್ಯ ಪಂಡಿತರು ಹಿಂದೂ ಆಚಾರವಾಗಿ ಹುಟ್ಟುವನು, ಆಚಾರವಾಗಿ ಕಾಲವಾಗುವನು ಎಂದು ಹಂಗಿಸುವರು. ಇದಕ್ಕೆ ನಾವು ನಾಚಬೇಕಾಗಿಲ್ಲ. ಈ ಆಚಾರ ಇರುವುದರಿಂದ ಈ ಜನಾಂಗ ಇನ್ನೂ ಬದುಕಿದೆ. ಹಿಂದಿನ ಕಷ್ಟ ಪರಂಪರೆಯ ಮೂಲಕ ಸಾಗಿಬಂದಿದೆ. ಮುಂದೆ ಬರುವುದನ್ನು ಧೈರ್ಯದಿಂದ ಎದುರಿಸಲು ಶಕ್ತಿ ಪಡೆದಿದೆ. ಆಚಾರ ಕೇವಲ ಹೊರಗಿನ ದೃಷ್ಟಿ

ಯಿಂದ ನೋಡಿದಾಗ ಹೊಟ್ಟಿನಂತೆ ಕಾಣುವುದು. ಅರ್ಥವಿಲ್ಲದ ಕ್ರಿಯೆಯಂತೆ ತೋರುವುದು. ಆದರೆ ಆ ಕ್ರಿಯೆ ಗಹನ ಆಧ್ಯಾತ್ಮಿಕ ತತ್ತ್ವಕ್ಕೆ ಒಂದು ಚಿಹ್ನೆ. ಭಾವನೆಗಳು ತಮಗೆ ತಾವೇ ಹಾರಾಡಲಾರವು ಪ್ರಪಂಚದಲ್ಲಿ. ಅದಕ್ಕೆ ಶಬ್ದದ ಸಹಾಯಬೇಕು. ಆ ಶಬ್ದ ಪರಂಪರೆಯನ್ನು ನೇತುಹಾಕಲು ಒಂದು ಆಚಾರದ ಗೂಟಬೇಕು. ಯಾವ ಧರ್ಮದಲ್ಲಿ ಹೆಚ್ಚು ಆಚಾರಗಳಿವೆಯೋ ಅಲ್ಲಿ ಹೆಚ್ಚು ಭಾವನೆಗಳೂ ತುಂಬಿವೆ. ಇಂದು ಎಲ್ಲರಿಗೂ ಅದು ವೇದ್ಯವಾಗದೇ ಇರಬಹುದು. ಆದರೆ ಅವುಗಳ ಅಂತರಾಳದಲ್ಲಿ ಶಕ್ತಿ ಗುಪ್ತಗಾಮಿನಿಯಾಗಿ ಹರಿಯುತ್ತಿದೆ. ನಾವು ಅದನ್ನು ಕಂಡುಹಿಡಿದರೆ ಅದು ನಮ್ಮ ಉದ್ಧಾರದ ನೆರವಿಗೆ ಬರುವುದು. ನಾವು ಇಂದು ಆಚಾರವನ್ನು ಅಲ್ಲಗಳೆಯಕೂಡದು. ನಮಗೆ ಅದು ಬೇಕಿಲ್ಲದೇ ಇದ್ದರೂ ಅನೇಕರಿಗೆ ಅದು ಬೇಕಾಗಿದೆ. ಅದರಿಂದ ಅನೇಕರಿಗೆ ಸಹಾಯವಾಗುವುದು. ಅದನ್ನು ಆದಷ್ಟು ಶುದ್ಧವಾಗಿ ಜೀವಂತವಾಗಿ ಇರುವಂತೆ ಮಾಡಬೇಕು. ಅದಕ್ಕೆ ಪುನಃ ಪ್ರಾಣಪ್ರತಿಷ್ಠೆ ಮಾಡಬೇಕು. ಯಾವುದು ಕೇವಲ ಯಾಂತ್ರಿಕವಾಗಿದೆಯೋ ಅದನ್ನು ಭಾವಪೂರ್ಣ ಮಾಡಬೇಕು. ನಮ್ಮ ಬಾಳಿನಲ್ಲಿ ಅದನ್ನು ಒಂದು ಕಲೆಯಾಗಿ ಮಾಡಿಕೊಳ್ಳಬೇಕು. ಶ್ರೀರಾಮಕೃಷ್ಣರು ಈ ಆಚಾರದ ವಿಷಯವನ್ನು ಒಂದು ಸುಂದರವಾದ ಉಪಮಾನದ ಮೂಲಕ ವಿವರಿಸುವರು. ಆಚಾರ ಅಕ್ಕಿಯ ಮೇಲಿರುವ ಹೊಟ್ಟಿನಂತೆ. ನಾವು ಊಟಮಾಡುವಾಗ ಹೊಟ್ಟನ್ನು ತೆಗೆದು ಅಕ್ಕಿಯನ್ನು ಬೇಯಿಸಿ ತಿಂದರೂ ನಾವು ಬಿತ್ತಬೇಕಾದರೆ ಬರೀ ಅಕ್ಕಿಯನ್ನು ಬಿತ್ತಿದರೆ ಬೆಳೆ ದೊರಕದು. ಮುಂದೆ ಅದನ್ನು ಬೆಳೆಯಬೇಕಾದರೆ ಮುಂದಿನವರಿಗೆ ಅದನ್ನು ಕೊಡಬೇಕಾದರೆ ಅಕ್ಕಿಗಿಂತ ಬತ್ತ ಶ್ರೇಷ್ಠ.

೨

## ಶಾಸ್ತ್ರ

ತತ್ತ್ವ ನಮಗೆ ದೊರಕುವುದು ಶಾಸ್ತ್ರದಲ್ಲಿ. ಹಿಂದೂಗಳಿಗೆ ಸಂಬಂಧಪಟ್ಟ ಶಾಸ್ತ್ರ ಯಾವುದು ಎಂದು ಕೇಳಿದರೆ ಇತರ ಧರ್ಮದವರಂತೆ ನಾವು ಯಾವುದೋ ಒಂದನ್ನು ಹೇಳಿದರೆ ಸಾಲದು. ನಮಗೆ ಹಲವು ಮುಖ್ಯ ಶಾಸ್ತ್ರಗಳಿವೆ. ನಮ್ಮ ಶಾಸ್ತ್ರಗಳಲ್ಲೆಲ್ಲಾ ಅತಿ ಪುರಾತನವಾದುವೇ ವೇದಗಳು. ವಿಶ್ವ ಧರ್ಮ ಸಾಹಿತ್ಯದಲ್ಲೇ ಇದರಷ್ಟು ಪುರಾತನವಾಗಿರುವುದು ಯಾವುದೂ ಇಲ್ಲವೆಂದು ಹೇಳಬಹುದು. ವೇದ ಎಂಬ ಪದ ವಿತ್ ಎಂದರೆ ತಿಳಿ ಎಂಬ ಧಾತುವಿನಿಂದ ಬಂದಿದೆ. ಪುರಾತನ ಕಾಲದಿಂದ ಬಂದ ಜ್ಞಾನಭಂಡಾರ ಇದು. ಇದನ್ನು ಹಲವು ಋಷಿಗಳು ಬರೆದಿರುವರು. ಇವರನ್ನು ಮಂತ್ರದ್ರಷ್ಟರು ಎಂದು ಹೇಳುವರು. ಇವರು ಅದನ್ನು ಬರೆದಾದ ಮೇಲೆ ಆ ವಿಷಯ ಜಾರಿಗೆ ಬರಲಿಲ್ಲ. ಆಗಲೇ ಯಾವ ಸತ್ಯ ಪ್ರಪಂಚದಲ್ಲಿ ಕೆಲಸ ಮಾಡುತ್ತಿತ್ತೋ ಅದನ್ನು ಶಬ್ದದ ಮೂಲಕ ವಿವರಿಸುವರು. ನ್ಯೂಟನ್ ಆಕರ್ಷಣ ಸಿದ್ಧಾಂತವನ್ನು ಪ್ರಚಾರ ಮಾಡಿದಂತೆ. ಅವನು ಆಕರ್ಷಣ ಸಿದ್ಧಾಂತವನ್ನು ಪ್ರಚಾರಮಾಡುವುದಕ್ಕೆ ಮುಂಚೆಯೂ ಆಕರ್ಷಣ ಶಕ್ತಿ ಕೆಲಸಮಾಡುತ್ತಿತ್ತು. ಆದರೆ ಜನರಿಗೆ ಅಂತಹ ಒಂದು ಶಕ್ತಿ ಕೆಲಸಮಾಡುತ್ತಿದೆ ಎಂದು ತಿಳಿ ದಿರಲಿಲ್ಲ. ಕಾಲಾನಂತರದಲ್ಲಿ ಜನರಿಗೆ ಆ ಶಕ್ತಿಯ ಅರಿ ವಿಲ್ಲದೇ ಹೋದರೂ ಅದು ಎಂದಿನಂತೆಯೇ ಕೆಲಸ ಮಾಡು ತ್ತಿರುವುದು. ಇದರಂತೆಯೇ ವೇದಗಳ ಋಷಿಗಳು. ಇವರು ಒಂದು ದೃಷ್ಟಿಯಿಂದ ವೇದವನ್ನು ಹೊಸದಾಗಿ ರಚಿಸಿದವರಲ್ಲ.

ಪ್ರಪಂಚದಲ್ಲಿ ಕೆಲಸಮಾಡುತ್ತಿರುವ ನಿಯಮವನ್ನು ಮನಗಂಡವರು. ಅದಕ್ಕೇ ಅವರನ್ನು ಮಂತ್ರದ್ರಷ್ಟ ಎಂದು ಕರೆಯುವರು. ತಾವು ಏನನ್ನು ಮನಗಂಡರೋ ಅದನ್ನು ವೇದಗಳಲ್ಲಿ ವಿವರಿಸಿರುವರು. ಈ ದೃಷ್ಟಿಯಿಂದ ವೇದ ಅನಾದಿ ಎಂದು ಹೇಳಬಹುದು.

ಮತ್ತೊಂದು ವಿಶೇಷವೇ ಈ ವೇದಗಳಲ್ಲಿ ಬರುವ ಋಷಿಗಳಲ್ಲಿ ಹಲವು ಸ್ತ್ರೀಯರೂ ಇರುವರು. ಇವರಲ್ಲಿ ಸಿಕತಾ ವಿಶ್ವಾವರಾ ನಿವಾವರೀ ಮುಂತಾದ ಹೆಸರುಗಳಿವೆ. ಇಲ್ಲಿ ಪುರುಷ ಮೇಲು ಸ್ತ್ರೀ ಕೀಳು ಎಂಬ ಭಾವನೆಗೆ ಅವಕಾಶವಿಲ್ಲ. ವೇದವನ್ನು ಸ್ತ್ರೀಯರು ಕೂಡ ಓದಬಹುದಾಗಿತ್ತು. ಕೆಲವು ವೇಳೆ ಸ್ತ್ರೀಯರೇ ಉಪಾಧ್ಯಾಯಿನಿಯರೂ ಆಗಿದ್ದರು. ಯಾಜ್ಞವಲ್ಕನಂತಹ ಮಹಾಮೇಧಾವಿಯನ್ನು ಕೂಡ ಎದುರಿಸಬಲ್ಲಂತಹ ಗಾರ್ಗಿಯಂತಹ ಬ್ರಹ್ಮವಾದಿನಿಯರು ಕೂಡ ಆಗಿನ ಕಾಲದಲ್ಲಿ ಇದ್ದರು.

ವೇದಗಳಲ್ಲಿ ಬರುವ ಮಹದ್‌ವ್ಯಕ್ತಿಗಳ ಪರಿಚಯು ನಮಗೆ ಅಷ್ಟು ವಿಶದವಾಗಿ ದೊರಕುವುದಿಲ್ಲ. ಶಾಂಡಿಲ್ಯ, ಭಾರದ್ವಾಜ, ಶ್ವೇತಕೇತು, ಯಾಜ್ಞವಲ್ಕ್ಯ ಮುಂತಾದ ಕೆಲವು ಹೆಸರುಗಳನ್ನು ಬಿಟ್ಟರೆ ಮಿಕ್ಕ ಉದಾತ್ತ ತತ್ತ್ವವನ್ನು ಹೇಳಿದ ಅನೇಕರ ಹೆಸರು ಕುಲಗೋತ್ರಗಳೇ ನಮಗೆ ಗೊತ್ತಾಗುವುದಿಲ್ಲ. ಪ್ರಪಂಚದಲ್ಲೆಲ್ಲಾ ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಪಟ್ಟ ಶ್ರೇಷ್ಠತಮ ಭಾವನೆಗಳನ್ನು ಕೊಟ್ಟಿದ್ದರೂ ಅನೇಕರು ಅನಾಮಧೇಯರಾಗಿಯೇ ಉಳಿದುಕೊಂಡಿರುವರು. ಪ್ರಪಂಚದಲ್ಲಿ ಮಾನವಕೋಟಿ ಇರುವವರೆಗೆ ಪುರಸ್ಕಾರಕ್ಕೆ ಯೋಗ್ಯವಾದಂತಹ ಜ್ಞಾನಾಮೃತವನ್ನು ನೀಡಿದ್ದರೂ ತಮ್ಮ ವಿಷಯವಾಗಿ

ಅವರು ಏನನ್ನೂ ಹೇಳಿಕೊಳ್ಳುವುದಿಲ್ಲ. ಇದೊಂದು ವಿಸ್ಮಯಕಾರಿಯಾದ ಅಹಂಕಾರ ಶೂನ್ಯತೆ ನಮಗೆ ವೇದದಲ್ಲಿ ತೋರುವುದು. ಹಲವಾರು ವಿಷಯಗಳನ್ನು ಹಲವು ಗ್ರಂಥಗಳಿಂದ ಕದ್ದೋ ಸಂಗ್ರಹಿಸಿಯೋ ಒಂದು ಪುಸ್ತಕದಲ್ಲಿಟ್ಟು ಅದರ ಮೇಲೆ ತಮ್ಮ ಹೆಸರನ್ನು ದೊಡ್ಡ ಅಕ್ಷರದಲ್ಲಿ ಮೆರೆಸಿಕೊಳ್ಳುವ ಕ್ಷುದ್ರ ಮಾನವರೆಲ್ಲಿ, ಮಹೋತ್ತುಂಗ ಭಾವನೆಯನ್ನು ಪ್ರಪಂಚಕ್ಕೆ ಕೊಟ್ಟರೂ ಅನಾಮಧೇಯರಾಗಿ ನಿಂತಿರುವ ಆ ಮಹಾಮಹಿಮರೆಲ್ಲಿ!

ವೇದಗಳು ನಾಲ್ಕು. ಋಗ್, ಯಜುರ್, ಸಾಮ ಮತ್ತು ಅಥರ್ವವೇದ. ವೇದಗಳಲ್ಲಿ ಸಂಹಿತೆ, ಬ್ರಾಹ್ಮಣ ಮತ್ತು ಉಪನಿಷತ್ತೆಂದು ಮೂರು ಭಾಗಗಳನ್ನು ನೋಡಬಹುದು. ಅದರಲ್ಲಿ ಮೊದಲನೆ ಎರಡು ಕರ್ಮಕಾಂಡದಲ್ಲಿಯೂ ಮೂರನೆಯದು ಜ್ಞಾನಕಾಂಡದಲ್ಲಿಯೂ ಬರುವುದು. ಜ್ಞಾನಕಾಂಡವನ್ನೇ ಉಪನಿಷತ್ ಅಥವಾ ವೇದಾಂತ ಎಂದು ಕರೆಯುವರು. ಕರ್ಮಕಾಂಡದಲ್ಲಿ ಯಜ್ಞಮಾಡುವ ಕಾಲದಲ್ಲಿ ಹೇಳುವ ಮಂತ್ರ, ಅವುಗಳನ್ನು ಮಾಡುವ ವಿಧಾನ ಮುಂತಾದುವುಗಳನ್ನು ವಿವರಿಸುವರು. ಅಂದಿನ ಕಾಲದಲ್ಲಿ ಗುಡಿಗೋಪುರಗಳಲ್ಲಿ ಮಾಡುವ ಪೂಜೆಗಳಿಗಿಂತಲೂ ಯಾಗ ಯಜ್ಞಗಳನ್ನು ಮಾಡಿ ದೇವರನ್ನು ಪ್ರಾರ್ಥಿಸುತ್ತಿದ್ದರು. ಪ್ರಕೃತಿಯ ಹಲವು ದೇವ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುತ್ತಿದ್ದರು. ಇಂದ್ರ, ವರುಣ, ಮರುತ್, ಅಶ್ವಿನಿ, ಅಗ್ನಿ ಮುಂತಾದ ದೇವತೆಗಳಿಗೆ ಅವರು ಹವಿಸ್ಸನ್ನು ಅರ್ಪಿಸುತ್ತಿದ್ದರೂ ಆರ್ಯರು ಹಲವು ದೇವರನ್ನು ನಂಬುತ್ತಿದ್ದರೆಂದಲ್ಲ. ಪ್ರಕೃತಿಯಲ್ಲೆಲ್ಲಾ ಒಂದೇ ಶಕ್ತಿ ಇರುವುದು. ಅದು ಬೇರೆ ಬೇರೆ ಕೆಲಸಮಾಡುವು

ದನ್ನು ನೋಡಿದಾಗ ಅದಕ್ಕೆ ಬೇರೆ ಬೇರೆ ಹೆಸರನ್ನು ಕೊಟ್ಟರೂ ಅವೆಲ್ಲಾ ಒಂದೇ ವ್ಯಕ್ತಿಯ, ಶಕ್ತಿಯ, ಆವಿರ್ಭಾವ ಎಂಬು ದನ್ನು ಚೆನ್ನಾಗಿ ಮನಗಂಡಿದ್ದರು.

ತಾತ್ತ್ವಿಕ ದೃಷ್ಟಿಯಿಂದ ಅನಂತರ ಬರುವುದೇ ಅತ್ಯಂತ ಶ್ರೇಷ್ಠವಾದುದು. ಅದೇ ಉಪನಿಷತ್ತು. ಅದನ್ನು ವೇದಾಂತ ಎಂತಲೂ ಕರೆಯುವರು. ಇವುಗಳಲ್ಲಿ ಹತ್ತು ಮುಖ್ಯವಾದ ಉಪನಿಷತ್ತುಗಳು ನಮಗೆ ವೇದಗಳಲ್ಲಿ ದೊರಕುತ್ತವೆ. ಅವೇ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿ ರೇಯ, ಐತರೇಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ. ಇವುಗಳಲ್ಲದೆ ಇನ್ನೂ ಸಣ್ಣ ಪುಟ್ಟ ಉಪನಿಷತ್ತುಗಳು ಅಲ್ಲಿ ಇಲ್ಲಿ ಹರಡಿಕೊಂಡಿವೆ. ಆದರೆ ಕಾಲದೃಷ್ಟಿಯಿಂದ ಬಹಳ ಪುರಾತನ ವಾದುದೆಂದೂ ಎಲ್ಲರ ಗೌರವಕ್ಕೂ ಪಾತ್ರವಾಗಿರುವುದು ಈ ಹತ್ತು ಉಪನಿಷತ್ತುಗಳು. ಉಪನಿಷತ್ ಎಂದರೆ ಹತ್ತಿರ ಕೇಳಿದ್ದು ಎಂತಲೂ ಅರ್ಥಮಾಡಬಹುದು. ಶಿಷ್ಯ ಗುರುವಿನ ಸಮೀಪದಲ್ಲಿ ಕುಳಿತು ಬಹಳ ಗಹನವಾದ ಉಪನಿಷತ್ತುಗಳನ್ನು ಕೇಳಿದನು. ಇದನ್ನು ಹಿಂದಿನಿಂದಲೂ ಒಂದು ರಹಸ್ಯಶಾಸ್ತ್ರ ವನ್ನಾಗಿ ಮಾಡಿದ್ದರು. ಇಲ್ಲಿ ರಹಸ್ಯ ಎಂದರೆ ಯಾರಿಗೂ ಹೇಳಕೂಡದು ಎಂಬ ಅರ್ಥ ದೃಷ್ಟಿಯಿಂದಲ್ಲ. ಯಾರು ಯೋಗ್ಯರೋ ಅಂತಹವರಿಗೆ ಮಾತ್ರ ಇದನ್ನು ಹೇಳಬೇಕಾ ಗಿತ್ತು. ಹಾಗೆ ಯೋಗ್ಯ ಎಂಬ ಪದ ಬಹಳ ಧ್ವನಿಪೂರ್ಣ ವಾದದ್ದು. ಬರೀ ಒಂದು ಜಾತಿಯಲ್ಲಿ ಹುಟ್ಟಿದರೆ ಮಾತ್ರ ಯೊಗ್ಯನಾಗಲಾರ. ಅವನಲ್ಲಿ ಉತ್ತಮ ಸಂಸ್ಕಾರಗಳಿರಬೇಕು. ಪ್ರಶಾಂತ ಚಿತ್ತನಾಗಿರಬೇಕು, ಬಹಳ ಸೂಕ್ಷ್ಮಮತಿಯುಳ್ಳವನಾ ಗಿರಬೇಕು. ಆತ್ಮವಿದ್ಯೆಯನ್ನು ಕಲಿಯಬೇಕು ಎಂಬ ಹಂಬಲ

ಇರಬೇಕು. ಇಂತಹವನಿಗೆ ಹೇಳಿದರೆ ಜ್ಞಾನ ಸಾರ್ಥಕವಾಗುವುದು ಎಂಬ ದೃಷ್ಟಿಯಿಂದ ಹಿಂದಿನವರು ಹಾಗೆ ಕಟ್ಟುಮಾಡಿದರೇ ಹೊರತು ಯಾವುದೋ ಒಂದು ಕೋಮನ್ನು ಇತರ ಕೋಮುಗಳಿಗಿಂತ ಶ್ರೇಷ್ಠವಾಗಿಟ್ಟಿರಬೇಕು ಎಂಬ ಭಾವನೆಯಿಂದಲ್ಲ. ಇಂದು ಅಂತಹ ಒಂದು ಭಾವನೆ ಬಂದಿದ್ದರೆ ಅದಕ್ಕೆ ಕಾರಣ ಅದನ್ನು ಸರಿಯಾಗಿ ತಿಳಿದುಕೊಳ್ಳದೇ ಇರುವುದು. ಯಾವ ಒಂದು ವಿದ್ಯೆಯನ್ನು ತಿಳಿದುಕೊಳ್ಳಬೇಕಾದರೂ ಅದಕ್ಕೆ ತಕ್ಕ ಯೋಗ್ಯತೆ ಇರಬೇಕು. ಯೋಗ್ಯತೆ ಇಲ್ಲದವನಿಗೆ ವಿದ್ಯೆ ಕೊಟ್ಟರೆ ಆ ವ್ಯಕ್ತಿ ಅದನ್ನು ತಪ್ಪು ತಿಳಿದುಕೊಂಡು ತಾನೂ ಹಾಳಾಗುವುದಲ್ಲದೆ ಇತರರ ಹಾನಿಗೂ ಕಾರಣವಾಗುವನು. ಗಹನ ವಿಷಯಗಳನ್ನು ತಪ್ಪು ತಿಳಿದುಕೊಂಡರೆ ಆಗುವ ಅನಾಹುತ ವಿಪರೀತ. ತಿಳಿಯದೇ ಇದ್ದರೆ ಅಷ್ಟು ಅಪಾಯವಿಲ್ಲ. ಈ ದೃಷ್ಟಿಯಿಂದ ಹಿಂದಿನ ಕಾಲದಲ್ಲಿ ಉಪನಿಷತ್ತನ್ನು ಯೋಗ್ಯ ವ್ಯಕ್ತಿಗಳಿಗೆ ಮಾತ್ರ ಕೊಡಬೇಕೆಂಬ ಅಭ್ಯಾಸವನ್ನು ಜಾರಿಗೆ ತಂದರು. ಇದನ್ನು ಶ್ರುತಿ ಎಂದೂ ಕರೆಯುವರು. ಅಂದರೆ ಗುರು ಮುಖೇಣ ಕೇಳಿದ್ದು. ತತ್ತ್ವ ಪ್ರಪಂಚದಲ್ಲಿ ಇದಕ್ಕೆ ಹೆಚ್ಚು ಬೆಲೆ. ಇಲ್ಲಿ ಜೀವ, ಜಗತ್ತು ಬ್ರಹ್ಮ ಇವುಗಳಿಗೆ ಸೇರಿದ ವಿಷಯಗಳ ಮೇಲೆ ನಮಗೆ ಭಾವನೆಗಳು ದೊರಕುವುವು. ಇದಕ್ಕೆ ಮೀರಿದ ಪ್ರಮಾಣ, ಶಾಸ್ತ್ರದಲ್ಲಿ ಇನ್ನಿಲ್ಲ ಎಂದು ಹೇಳುವರು. ಏಕೆಂದರೆ ಇವೆಲ್ಲಾ ಆಧ್ಯಾತ್ಮಿಕ ಅನುಭವವನ್ನು ಪ್ರತ್ಯಕ್ಷ ಮನಗಂಡ ಮಹಾವ್ಯಕ್ತಿಗಳು ಸಾರಿದ್ದು. ಇಲ್ಲಿರುವುದು ಕಲ್ಪನೆಯಲ್ಲ, ಊಹೆಯಲ್ಲ, ಅವರ ಸ್ವಂತ ಅನುಭವ. ನಮಗೆ ಈಗ ಅದು ಪರೋಕ್ಷವಾಗಿದ್ದರೂ ಅವರಿಗೆ ಪ್ರತ್ಯಕ್ಷ.

ಅನಂತರವೇ ಸ್ಮೃತಿಗೆ ಬರುವೆವು. ಸ್ಮೃತಿ ಯಾವಾಗಲೂ ಶ್ರುತಿಗೆ ಅಧೀನ. ಶ್ರುತಿ ಸ್ಮೃತಿಗಳಲ್ಲಿ ಭಿನ್ನಾಭಿಪ್ರಾಯವಿದ್ದರೆ ಯಾವಾಗಲೂ ಶ್ರುತಿಯನ್ನು ಹಿಡಿದು ಸ್ಮೃತಿಯನ್ನು ಬಿಡಬೇಕು. ಸ್ಮೃತಿ, ಸಮಾಜ, ವ್ಯಕ್ತಿ, ವರ್ಣ, ಆಶ್ರಮ ಮುಂತಾದುವಕ್ಕೆ ಸಂಬಂಧಪಟ್ಟ ಸಮಸ್ಯೆಯನ್ನು ಎದುರಿಸಿ ಅದಕ್ಕೆ ಪರಿಹಾರ ಉಪಾಯಗಳನ್ನು ಕಂಡುಹಿಡಿಯುವುದು. ವ್ಯಕ್ತಿಗೆ ವಿಧಿ ನಿಷೇಧಗಳನ್ನು ನೇಮಿಸುವುದು. ಆಯಾ ವರ್ಣದವರಿಗೆ, ಆಶ್ರಮದವರಿಗೆ ಸೇರಿದ ಕರ್ತವ್ಯಗಳನ್ನು ಹೇಗೆ ಮಾಡಬೇಕೆಂಬುದನ್ನು ವಿವರಿಸುವುದು. ಮನುವಿನಿಂದ ಹಿಡಿದು ಇಂದಿನವರೆಗೆ ನೂರಾರು ಜನ ಸ್ಮೃತಿಕಾರರು ಬಂದು ಹಲವು ಸ್ಮೃತಿಗಳನ್ನು ಬರೆದಿಟ್ಟಿರುವರು. ಇವುಗಳೆಲ್ಲಾ ಆಯಾ ದೇಶ ಕಾಲಕ್ಕೆ ಅನ್ವಯಿಸುವುವು. ಸ್ಮೃತಿ ಕಾಲಕಾಲಕ್ಕೆ ಬದಲಾಯಿಸುತ್ತಾ ಬಂದಿದೆ. ಏಕೆಂದರೆ ಇದು ಕಾಲದೇಶ ಪ್ರಪಂಚದಲ್ಲಿ ಏಳುವ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ಇರುವುದು. ಈ ಸಮಸ್ಯೆಗಳು ಯಾವಾಗಲೂ ಬದಲಾಯಿಸುತ್ತಾ ಇವೆ. ಹಿಂದಿನಂತೆಯೇ ಇರುವುದಿಲ್ಲ. ಸಮಾಜದ ಒಂದು ಸ್ವಭಾವ ಬದಲಾವಣೆ. ಅವು ಬದಲಾಯಿಸಿದರೆ ಅದಕ್ಕೆ ತಕ್ಕಂತೆ ವಿಧಿ ನಿಷೇಧಗಳು ಬದಲಾಯಿಸುತ್ತಿರುವುವು. ಆದರೆ ಶ್ರುತಿ ಆಧ್ಯಾತ್ಮಿಕ ಸತ್ಯಗಳನ್ನು ಕುರಿತದ್ದು. ಇವು ಕಾಲದೇಶಕ್ಕೆ ತಕ್ಕಂತೆ ಬದಲಾಯಿಸುವುದಿಲ್ಲ. ಇವು ನಿತ್ಯವಾದ ವಸ್ತುಗಳನ್ನು ಕುರಿತದ್ದು. ಹಿಂದಿನ ಕಾಲದಲ್ಲಿ ಸಮಾಜದ ಮುಂದಾಳುಗಳಾದ ಋಷಿಗಳು ರಾಜರ ಆಜ್ಞೆಗೆ ತಕ್ಕಂತೆ ಸ್ಮೃತಿಗಳನ್ನು ಹೊಸ ಹೊಸದಾಗಿ ಬರೆಯುತ್ತಿದ್ದರು. ಇಂದು ಪ್ರಜಾಪ್ರಭುತ್ವವಾದುದರಿಂದ ರಾಜನಿಲ್ಲ. ಆದರೆ ಪ್ರಜಾ ಮುಖಂಡರು

ಸಮಾಜ ಮತ್ತು ದೇಶಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ಎದುರಿಸಲು ಶಾಸನಾವಳಿಗಳನ್ನು ತಯಾರು ಮಾಡುತ್ತಿರುವರು. ಈಗಿನ ಕಾಲದಲ್ಲಿ ಶಾಸನ ಸಭೆಯಿಂದ ಹೊರಬಿದ್ದ ಕಾನೂನಿಗೆ ಹೇಗೆ ಬೆಲೆಯೋ ಹಾಗೆ ಆಗಿನಕಾಲದಲ್ಲಿ ಸ್ಮೃತಿಗೆ. ಎಂತಹ ಸಮಾಜವಾದರೂ ಆಗಲಿ ಅದರ ರಕ್ಷಣೆಗೆ ಒಂದು ಕಾಯಿದೆ ಇರಬೇಕು. ಇಂತಹ ಒಂದು ಕಾಯಿದೆಯನ್ನು ಸ್ಮೃತಿ ಇಂದಿನವರೆಗೆ ನಮಗೆ ಒದಗಿಸಿಕೊಟ್ಟಿದೆ.

**ದರ್ಶನ**: ಕಾಲಕ್ರಮೇಣ ಷಡ್ದರ್ಶನಗಳು ಬಳಕೆಗೆ ಬಂದವು. ಇವೇ ಪೂರ್ವಮೀಮಾಂಸ, ಉತ್ತರಮೀಮಾಂಸ, ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ. ಇವುಗಳ ಕರ್ತೃಗಳೇ ಜೈಮುನಿ, ಬಾದರಾಯಣ, ಕಪಿಲ, ಪತಂಜಲಿ ಗೌತಮ, ಕಣಾದರು. ಈ ಸಾಹಿತ್ಯವೆಲ್ಲಾ ಸೂತ್ರರೂಪದಲ್ಲಿವೆ. ಸಾಧ್ಯವಾದಷ್ಟೂ ಕಡಿಮೆ ಪದವನ್ನು ಉಪಯೋಗಿಸುವರು. ಕನಿಷ್ಠ ಪಕ್ಷದ ಪದಗಳು, ಯಥೇಚ್ಛವಾದ ಅರ್ಥ ಅವರ ಗುರಿಯಾಗಿತ್ತು. ಈಗಿನ ಕಾಲದಲ್ಲಿ ಕೆಲವರು ಕನಿಷ್ಠ ಅಭಿಪ್ರಾಯಗಳನ್ನು ಆಡಂಬರದ ಶೈಲಿಯಲ್ಲಿ ವಿವರಿಸುವಂತೆ! ಆಗಿನಕಾಲದಲ್ಲಿ ಪದಗಳು ತತ್ತರಿಸಿ ಹೋಗುವಷ್ಟು ಅರ್ಥವನ್ನು ಅದರ ಮೇಲೆ ಹೇರುವುದು ಒಂದು ರೂಢಿಯಾಗಿತ್ತು. ಆದಕಾರಣ ಅಲ್ಪ ಅಕ್ಷರಗಳ ಸಹಾಯದಿಂದ ಬೇಕಾದಷ್ಟು ವಿಷಯಗಳನ್ನು ಹೇಳುವ ಸ್ಥಿತಿಗೆ ಬಂದರು. ಆದರೆ ಕಾಲಕ್ರಮೇಣ ಸೂತ್ರದಲ್ಲಿರುವ ಆಯಾ ಪದಕ್ಕೆ ಆಗಿನಕಾಲದಲ್ಲಿ ರೂಢಿಯಲ್ಲಿದ್ದ ಅರ್ಥಗಳು ಮರೆಯತೊಡಗಿದಾಗ ಅನಂತರ ಬಂದವರು ಅದನ್ನು ತಿಳಿದುಕೊಳ್ಳುವುದಕ್ಕೆ ಶಕ್ತರಾಗಿರಲಿಲ್ಲ. ಸಾಧಾರಣ ಜನರಿಗೆ ಅದನ್ನು ತಿಳಿಸುವುದಕ್ಕಾಗಿ ಸೂತ್ರದ ಮೇಲೆ ಭಾಷ್ಯಗಳು ಹುಟ್ಟಿದವು.

ಕೆಲವು ವೇಳೆ ಆ ಭಾಷ್ಯಗಳೂ ಕೂಡ ಸಾಧಾರಣ ಮನುಷ್ಯರಿಗೆ ಅರ್ಥವಾಗುವಂತೆ ಇರಲಿಲ್ಲ. ಆ ಭಾಷ್ಯಕ್ಕೆ ಮತ್ತೊಂದು ಟೀಕಾ ಬರೆದರು. ಈಗ ನಮ್ಮಲ್ಲಿ ಬಳಕೆಯಲ್ಲಿರುವ ಬ್ರಹ್ಮಸೂತ್ರಕ್ಕೆ ಹೀಗೆ ಆಗಿರುವುದನ್ನು ನಾವು ನೋಡಬಹುದು. ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದರು. ಆ ಭಾಷ್ಯಕ್ಕೆ ಅವರ ಶಿಷ್ಯರು ಟೀಕಾ ಬರೆದರು. ಆ ಟೀಕೆಗೆ ಅನಂತರ ಬಂದವರು ಮತ್ತೊಂದು ಟೀಕೆಯನ್ನು ಬರೆದರು.

**ಪುರಾಣ**: ವೇದಾಂತ ಮತ್ತು ದರ್ಶನ ಶಾಸ್ತ್ರಗಳಲ್ಲಿ ಬೇಕಾದಷ್ಟು ತತ್ತ್ವವಿದ್ದರೂ ಅದನ್ನು ಎಲ್ಲರೂ ಓದಿ ತಿಳಿದುಕೊಳ್ಳುವ ಸ್ಥಿತಿಯಲ್ಲಿ ಇರಲಿಲ್ಲ. ಇದನ್ನು ತಿಳಿದುಕೊಳ್ಳಬೇಕಾದರೆ ಬಹಳ ಉತ್ತಮ ಮಟ್ಟದ ವಿಚಾರ ಪ್ರಬುದ್ಧವಾಗಿರಬೇಕು. ಆದರೆ ತತ್ತ್ವ ಹೆಚ್ಚು ಪ್ರಮಾಣದಲ್ಲಿ ಅಲ್ಲದೇ ಇದ್ದರೂ ಮಿತಪ್ರಮಾಣದಲ್ಲಿ ಆದರೂ ಎಲ್ಲರ ಬಾಳಿಗೂ ಆವಶ್ಯಕ. ಅದನ್ನು ಎಲ್ಲರೂ ಜೀರ್ಣಿಸಿಕೊಳ್ಳುವ ರೀತಿಯಲ್ಲಿ ಹೇಳಬೇಕು. ಅದಕ್ಕಾಗಿಯೇ ಪುರಾಣಗಳು ಹುಟ್ಟಿದವು. ಪುರಾಣಗಳಲ್ಲಿ ಹದಿನೆಂಟು ಮುಖ್ಯ ಪುರಾಣಗಳಿವೆ. ಅಲ್ಲಿ ಶಿವ, ವಿಷ್ಣು, ದೇವಿಗೆ ಸಂಬಂಧಪಟ್ಟ ಕಥೆಗಳಿವೆ. ಆಗಿನಕಾಲದ ಕೆಲವು ಚಾರಿತ್ರಕ ಘಟನೆಗಳನ್ನೂ ಅವರ ಆಚಾರ ವ್ಯವಹಾರವನ್ನೂ ಅಲ್ಲಿ ನೋಡುವೆವು. ಆದರೆ ಪುರಾಣಗಳೆಲ್ಲಾ ನಡೆದುವು ಎಂದು ಪರಿಗಣಿಸುವುದು ಸರಿಯಾದ ದೃಷ್ಟಿಯಲ್ಲ. ಅವುಗಳಲ್ಲಿ ಸ್ವಲ್ಪಭಾಗ ನಡೆದಿರಬಹುದು. ಬಹುಭಾಗ ಉತ್ಪ್ರೇಕ್ಷೆ ಮತ್ತು ಕಲ್ಪನೆಯಿಂದ ತುಂಬಿರಬಹುದು. ಪುರಾಣಗಳ ಗುರಿ ಚರಿತ್ರೆಯ ಗುರಿಯಲ್ಲ. ಧರ್ಮ ಮತ್ತು ಸತ್ಯವನ್ನು ಆಕರ್ಷಕ ರೀತಿಯಲ್ಲಿ ಜನಸಾಮಾನ್ಯರಿಗೆ ತಿಳಿಯುವಂತೆ ಹೇಳುವುದು. ಅವು ಚಾರಿತ್ರಕ ದೃಷ್ಟಿಯಿಂದ ನಡೆಯದೇ

ಇದ್ದರೂ ಕಾವ್ಯದೃಷ್ಟಿಯಿಂದ ಅವು ಸತ್ಯ. ಪುರಾಣಕರ್ತೃಗಳು ಮಾನವನ ಮುಂದೆ ಒಂದು ಜೀವಂತವಾದ ಜ್ವಲಂತ ಆದರ್ಶ ವನ್ನು ತಂದಿಡುವರು. ಹದಿನೆಂಟು ಪುರಾಣಗಳನ್ನೂ ವ್ಯಾಸರೇ ಬರೆದರು ಎನ್ನುವರು. ಬ್ರಹ್ಮಾಂಡ ಪುರಾಣ, ಪದ್ಮ ಪುರಾಣ, ಮುಂತಾದ ಒಂದೊಂದು ಪುರಾಣವನ್ನು ಈಗಿನ ಕಾಲದಲ್ಲಿ ಬರೆಯಬೇಕಾದರೆ ಒಬ್ಬನಿಗೆ ಸಮಯ ಸಾಲದು. ಅಂತಹುದರಲ್ಲಿ ಇಷ್ಟೊಂದು ಪುರಾಣಗಳನ್ನು ಒಬ್ಬರು ಹೇಗೆ ಬರೆದರೋ! ಯಾವುದಾದರೂ ಒಂದು ಪುರಾಣವನ್ನು ವ್ಯಾಸರು ಬರೆದಿದ್ದಿರ ಬಹುದು. ಆ ಪುರಾಣ ಪ್ರಚಲಿತವಾಗಿ ಜನರ ಆದರಕ್ಕೆ ಪಾತ್ರ ವಾಗಿರುವುದನ್ನು ಕಂಡು ಅನಂತರ ಬಂದವರೂ ಪುರಾಣಗಳನ್ನು ತಾವೇ ಬರೆದು ಅದಕ್ಕೆ ವ್ಯಾಸರ ಹೆಸರನ್ನು ಇಟ್ಟಿರಬಹುದು. ಏಕೆಂದರೆ ಅವರ ಹೆಸರಿನಲ್ಲಿ ಹೋದರೆ ಊರ್ಜಿತವಾಗಿ ನಿಂತು ಜೀವಿಗಳಿಗೆ ಅದರಿಂದ ಸಹಾಯವಾಗುವುದೆಂಬ ಭಾವನೆಯಿಂದ ತಮ್ಮ ಕರ್ತೃತ್ವವನ್ನೂ ವ್ಯಾಸರಿಗೆ ಧಾರೆ ಎರೆದಿದ್ದರೂ ಇರ ಬಹುದು. ಅಂತೂ ಒಬ್ಬ ವ್ಯಾಸರೋ, ಹಲವು ವ್ಯಾಸರೋ ನಿಜವಾದ ವ್ಯಾಸರೋ, ಕಾಲ್ಪನಿಕ ವ್ಯಾಸರೋ, ಯಾರಾದರೂ ಅವನ್ನು ಬರೆದಿರಲಿ ಚಿಂತೆಯಿಲ್ಲ. ಪರಿಣಾಮದೃಷ್ಟಿಯಿಂದ ಈಗಲೂ ಅವು ಜಾಗೃತವಾಗಿವೆ. ಗಹನವಾದ ಸತ್ಯ ಆಬಾಲ ವೃದ್ಧರಿಗೆ ಹಿಡಿಸುವಂತೆ ಮಾಡಿದೆ.

**ಇತಿಹಾಸ**: ಇದೇ ಗುಂಪಿಗೆ ಸೇರಿದ ಆದರೆ ಇದರಲ್ಲಿ ಸ್ವಲ್ಪ ವ್ಯತ್ಯಾಸವಾಗಿರುವ ಗ್ರಂಥಗಳೇ ಅನಂತರ ಬರುವ ರಾಮಾ ಯಣ, ಮಹಾಭಾರತಗಳು. ಇವುಗಳನ್ನು ಐತಿಹ್ಯ ಎಂದರೆ ಚರಿತ್ರೆ ಎಂಬ ದೃಷ್ಟಿಯಿಂದ ಹಿಂದಿನವರು ನೋಡುವರು. ಅಂದರೆ ಇವುಗಳಲ್ಲಿ ಬರುವ ಘಟನೆಗಳೆಲ್ಲ ನಿಜವಾಗಿ ನಡೆದದು

ಎಂದು ಭಾವಿಸುವರು. ಘಟನೆಗಳೇನೋ ನಡೆದಿರಬಹುದು. ಆದರೆ ಕವಿಯ ಕೈಗೆ ಸಿಕ್ಕಿದ ಘಟನೆ ಅವನ ಕಲ್ಪನೆಯಿಂದ ಪೋಷಿತವಾಗಿ ಅಲಂಕಾರಮಯವಾಗಿ ಬೇರೊಂದು ರೂಪನ್ನು ಧರಿಸಿ ನಮ್ಮ ಮುಂದೆ ನಿಲ್ಲುವುದು. ಆಗ ಬರೀ ಚಾರಿತ್ರಿಕ ಘಟನೆಯಲ್ಲಿ ಇಲ್ಲದ ಸೊಬಗು, ಸೌಂದರ್ಯ, ಉತ್ಪ್ರೇಕ್ಷೆ ಮತ್ತು ಕಾವ್ಯಭಾಗಗಳನ್ನು ನೋಡುವೆವು. ಇವುಗಳ ಮುಖ್ಯ ಗುರಿಕೂಡ ಜನರನ್ನು ಧರ್ಮಮಾರ್ಗದಲ್ಲಿ ಒಯ್ಯುವುದಕ್ಕೆ ಸಹಾಯಮಾಡುವುದು. ವಾಲ್ಮೀಕಿಗಳು ರಾಮಾಯಣ ಬರೆದಿರುವರು, ವ್ಯಾಸರು ಮಹಾಭಾರತ ಬರೆದಿರುವರು. ಇಲ್ಲಿ ಬರುವ ನಾಯಕರು ಮಾನವ ಯಾವ ಯಾವ ಕಷ್ಟನಷ್ಟವನ್ನು ಎದುರಿಸುವನೋ ಅವುಗಳನ್ನೆಲ್ಲಾ ಎದುರಿಸುವರು, ಅವುಗಳೊಂದಿಗೆ ಹೋರಾಡಿ ಪಾರಾಗುವರು. ನಾವು ಧರ್ಮಸಂಕಟದಲ್ಲಿ ಸಿಕ್ಕಿಕೊಂಡಾಗ, ಕಿಂಕರ್ತವ್ಯಮೂಢರಾದಾಗ, ರಾಮಾಯಣ ಮಹಾಭಾರತಗಳನ್ನು ಒಮ್ಮೆ ತೆರೆದು ನೋಡಿದರೆ ಅಂದಿನ ಕಾಲದ ಮಹಾವ್ಯಕ್ತಿಗಳು ಹೇಗೆ ಬಗೆಹರಿಸಿರುವರು ಎಂಬುದನ್ನು ನೋಡುವೆವು. ಮಹಾಭಾರತವನ್ನು ಪಂಚಮವೇದವೆಂದು ಪರಿಗಣಿಸುವರು. ವೇದಕ್ಕೆ ಯಾವ ಒಂದು ಪ್ರಾಮುಖ್ಯತೆ ಇದೆಯೋ ಅಷ್ಟೇ ಪ್ರಾಮುಖ್ಯತೆಯನ್ನು ಜನ ಮಹಾಭಾರತಕ್ಕೆ ಕೊಡುವರು. ಈಗಲೂ ಹಳ್ಳಿ ಹಳ್ಳಿಯಲ್ಲಿ ಜನರಿಗೆ ಹಿಂದೂ ಧರ್ಮ ಮತ್ತು ಸಂಸ್ಕೃತಿಯ ಆದರ್ಶ ಪರಿಚಯವಾಗಿರುವುದು ರಾಮಾಯಣ ಮಹಾಭಾರತಗಳಿಂದ ಆದ ನಾಟಕ, ವಾಚನ, ಹರಿಕಥೆ ಮುಂತಾದುವುಗಳಿಂದ

**ಭಗವದ್ಗೀತಾ :** ಮಹಾಭಾರತದ ಯುದ್ಧಪರ್ವದ ಪ್ರಾರಂಭದಲ್ಲಿ ಭಗವದ್ಗೀತಾ ಬರುವುದು. ಕುರುಕ್ಷೇತ್ರದ ರಣರಂಗದಲ್ಲಿ

ಕೌರವ ಪಾಂಡವರು ಯುದ್ಧಕ್ಕೆ ಸನ್ನದ್ಧರಾಗಿ ನೆರೆದಿದ್ದರು. ಶ್ರೀಕೃಷ್ಣ ಅರ್ಜುನನ ಸಾರಥಿಯಾಗುವನು. ಯುದ್ಧ ಮಾಡುವುದಕ್ಕೆ ಮುಂಚೆ ಯಾರ ಮೇಲೆ ನಾನು ಯುದ್ಧ ಮಾಡಬೇಕಾಗಿದೆಯೋ ಅವರನ್ನು ನಾನೊಮ್ಮೆ ನೋಡುವೆನು, ರಥವನ್ನು ಎರಡು ಸೈನ್ಯಗಳ ಮಧ್ಯದಲ್ಲಿ ನಿಲ್ಲಿಸು ಎಂದು ಅರ್ಜುನ ಶ್ರೀಕೃಷ್ಣನನ್ನು ಪ್ರಾರ್ಥಿಸಿಕೊಳ್ಳುವನು. ಶ್ರೀಕೃಷ್ಣ ರಥವನ್ನು ಎರಡು ಸೈನ್ಯಗಳ ಮಧ್ಯದಲ್ಲಿ ನಿಲ್ಲಿಸುವನು. ಅರ್ಜುನ, ಭೀಷ್ಮ, ದ್ರೋಣಾದಿಗಳನ್ನು ನೋಡಿದಾಗ ಗುರುಹಿರಿಯರನ್ನು ಹೇಗೆ ಕೊಲ್ಲುವುದು ಎಂಬ ವ್ಯಾಮೋಹ ಅವನ ಮನಸ್ಸನ್ನು ಕಲಕಿ ಕಿಂಕರ್ತವ್ಯ ಮೂಢನನ್ನಾಗಿ ಮಾಡಿತು. ಆಗಲೇ ಶ್ರೀಕೃಷ್ಣ ಗೀತೆಯ ಉಪದೇಶವನ್ನು ಅರ್ಜುನನಿಗೆ ಮಾಡಿ, ಅವನ ಸಂದೇಹವನ್ನು ನಿರ್ಮೂಲಗೊಳಿಸಿ, ಧರ್ಮಯುದ್ಧವನ್ನು ಅರ್ಜುನನ ಕೈಯಿಂದ ಮಾಡಿಸುವನು. ಈ ಭಾಗವೇ ಹಿಂದೂಗಳಲ್ಲೆಲ್ಲಾ ಬಹಳ ಬಳಕೆಯಲ್ಲಿರುವ ಭಗವದ್ಗೀತೆಯೆಂಬ ಧರ್ಮಗ್ರಂಥ. ಉಪನಿಷತ್ತಿನ ಸಾರವೇ ಇಲ್ಲಿದೆ. ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿದೆ. ಯಾವ ಜಾತಿಕೋಮಿಗೆ ಸೇರಿರಲಿ, ಎಲ್ಲರಿಗೂ ಸರ್ವಮಾನ್ಯವಾದ ಧರ್ಮಗ್ರಂಥವೆಂದರೆ ಭಗವದ್ಗೀತಾ. ಇದು ಮಹಾಭಾರತದ ಒಂದು ಮೂಲೆಯಲ್ಲಿದ್ದರೂ, ಗಾತ್ರದಲ್ಲಿ ಕೇವಲ ಏಳುನೂರು ಶ್ಲೋಕಗಳನ್ನು ಒಳಗೊಂಡಿದ್ದರೂ, ಅಸಂಖ್ಯಾತ ಭಾರತೀಯರು ಸಹಸ್ರಾರು ವರ್ಷಗಳಿಂದ ಆಧ್ಯಾತ್ಮಿಕ ಜೀವನದಲ್ಲಿ ಮಾಡಿದ ಆವಿಷ್ಕಾರಗಳನ್ನೆಲ್ಲಾ ಒಳಗೊಂಡಿದೆ, ತತ್ತ್ವಗಳನ್ನೆಲ್ಲಾ ಒಳಗೊಂಡಿದೆ, ಯೋಗಗಳನ್ನೆಲ್ಲಾ ಒಳಗೊಂಡಿದೆ. ಭಟ್ಟಿ ಇಳಿಸಿದ ಹಿಂದೂಧರ್ಮವೇ ಗೀತಾರೂಪವನ್ನು ಧರಿಸಿದೆ.

**ಪ್ರಸ್ಥಾನತ್ರಯ** : ಹಿಂದೂ ದರ್ಶನಕ್ಕೆ ಮೂರು ಗ್ರಂಥಗಳು

ಆಧಾರ ಸ್ತಂಭವಂತಿವೆ. ಅವೇ ಉಪನಿಷತ್ತು, ಬ್ರಹ್ಮಸೂತ್ರ, ಮತ್ತು ಭಗವದ್ಗೀತಾ. ಯಾವ ಆಚಾರ್ಯರು ಬರಲಿ ತಾವು ಯಾವ ಸಂದೇಶವನ್ನು ಹೇಳಬೇಕಾದರೂ ಈ ಮೂರು ಗ್ರಂಥಗಳ ಆಧಾರದ ಮೂಲಕ ಹೇಳಬೇಕು. ತಾವು ಏನು ಹೇಳಬೇಕೆಂದು ಬಯಸುವರೋ ಅದಾಗಲೇ ಪ್ರಸ್ಥಾನತ್ರಯದಲ್ಲಿದೆ ಎಂದು ತೋರಿದರೆ ಅವರ ಮಾತಿಗೆ ಪುರಸ್ಕಾರ. ಇದಲ್ಲದೆ ಹಿಂದಿನವರು ಯಾರೂ ಆಲೋಚಿಸದ, ಹೇಳದ ಒಂದು ನವೀನ ತತ್ತ್ವವನ್ನು ನಾನು ನಿಮಗೆ ಸಾರುತ್ತೇನೆ ಎಂದರೆ ಅಂತಹ ವ್ಯಕ್ತಿಗೆ ಹಿಂದೂ ಧರ್ಮದಲ್ಲಿ ಪುರಸ್ಕಾರ ಸಿಕ್ಕುವುದು ಬಹಳ ಅಪರೂಪ. ಅಂತಹ ವ್ಯಕ್ತಿಗಳಿಗೆ ಬೇರೆ ದೇಶದಲ್ಲಿ ಎಂತಹ ಆಲೋಚನಾಪರರು (original thinkers)ಎಂದು ಬೇಕಾದಷ್ಟು ಪುರಸ್ಕಾರಕೊಡಬಹುದು. ಆದರೆ ಭಾರತೀಯರು ಬಡಪಟ್ಟಿಗೆ ನವೀನತೆಗೆ ಜಗ್ಗುವವರಲ್ಲ. ಆದಕಾರಣವೇ ಶಂಕರ, ರಾಮಾನುಜ, ಮಧ್ವ ಮುಂತಾದ ಆಚಾರ್ಯರೆಲ್ಲಾ ಪ್ರಸ್ಥಾನತ್ರಯಗಳ ಮೇಲೆ ಭಾಷ್ಯವನ್ನು ಬರೆದು ತಾವು ಹೇಳುವ ತತ್ತ್ವ ಆಗಲೇ ಅಲ್ಲಿದೆ ಎಂದು ತೋರಿದರು. ಆಗ ಮಾತ್ರ ನಮ್ಮ ಜನ ಅವನ್ನು ಸ್ವೀಕರಿಸತೊಡಗಿದರು. ಕಾಲ ತೂರಿ ಯಾವುದನ್ನು ಉಳಿಸಿದೆಯೋ ಅದೊಂದೇ ಯೋಗ್ಯ, ಶ್ರೇಷ್ಠ ಎಂಬ ಭಾವನೆ ದೃಢವಾಗಿ ಊರಿದೆ ಭಾರತೀಯರಲ್ಲಿ. ಕಾಲದ ಬಿರುಗಾಳಿ ಜೊಳ್ಳನ್ನೆಲ್ಲಾ ತೂರಿ ಉಳಿಸಿದ ಗಟ್ಟಿಯ ಕಾಳು ಪ್ರಸ್ಥಾನತ್ರಯ. ಆದಕಾರಣವೇ ಸಕಲ ಹಿಂದೂಗಳಿಗೂ ಪರಮ ಪೂಜ್ಯವಾದ ಪವಿತ್ರಗ್ರಂಥ ಇವು.

**ಇತರ ಶಾಸ್ತ್ರಗಳು :** ತಂತ್ರಶಾಸ್ತ್ರ, ಉತ್ತರದಲ್ಲಿ ಅದರಲ್ಲೂ ಬಂಗಾಳದಲ್ಲಿ ತಂತ್ರಶಾಸ್ತ್ರ ಎಂಬುದು ರೂಢಿಯಲ್ಲಿದೆ.

ಪರಾತ್ಪರ ವಸ್ತುವನ್ನು ಶಕ್ತಿ, ದೇವಿ ಎಂದು ಉಪಾಸನೆ ಮಾಡುವರು. ಅದಕ್ಕೆ ಸಂಬಂಧಪಟ್ಟ ಗ್ರಂಥಗಳನ್ನೇ ತಂತ್ರಶಾಸ್ತ್ರ ಎನ್ನುವರು. ಅವುಗಳಲ್ಲಿ ಮಹಾನಿರ್ವಾಣತಂತ್ರ, ಕುಲಾರ್ಣವತಂತ್ರ, ಕುಲಸಾರ, ಪ್ರಪಂಚಸಾರ, ತಂತ್ರರಾಜ ಮುಂತಾದ ಗ್ರಂಥಗಳು ಇವೆ.

**ಶೈವ ಮತ್ತು ವೈಷ್ಣವ ಗ್ರಂಥಗಳು** : ದಕ್ಷಿಣದಲ್ಲಿ ಶೈವ ಮತ್ತು ವೈಷ್ಣವ ಸಂಪ್ರದಾಯಕ್ಕೆ ಸೇರಿದ ಹಲವು ಗ್ರಂಥಗಳು ರೂಢಿಯಲ್ಲಿವೆ. ಇವುಗಳೆಲ್ಲಾ ಆಯಾ ಪಂಗಡದವರಿಗೆ ಅನುಕೂಲವಾದ ರೀತಿಯಲ್ಲಿ ಉಪಾಸನೆ, ತತ್ತ್ವ ಮುಂತಾದುವನ್ನು ವಿವರಿಸುವುದು.

## ೩

## ತತ್ತ್ವ

ಈ ಪ್ರಪಂಚದಲ್ಲಿ ಮೂರು ವಸ್ತುಗಳನ್ನು ನಾವು ನೋಡುತ್ತೇವೆ. ಅದೇ ಜೀವ. ಎರಡನೆಯದೇ ಈ ಜೀವರು ಆಟವಾಡುವ ಮೈದಾನ ಜಗತ್. ಜೀವ ಜಗತ್ತುಗಳನ್ನು ತನ್ನ ಆಳ್ವಿಕೆಯಲ್ಲಿ ಇಟ್ಟುಕೊಂಡಿರುವ ದೇವರು ಮೂರನೆಯದು. ಈ ಜೀವ ಜಗತ್ತು ನಮ್ಮಲ್ಲಿ ಎಲ್ಲರಿಗೂ ಕಾಣುತ್ತಿದ್ದರೂ ಇವೆರಡಕ್ಕಿಂತ ಹೆಚ್ಚು ಸತ್ಯವೂ ಮುಖ್ಯವೂ ಆದ ದೇವರು ಎಲ್ಲೋ ಕೆಲವು ವ್ಯಕ್ತಿಗಳಿಗೆ ಮಾತ್ರ ಅರ್ಥವಾಗಿದೆ. ಉಳಿದವರಿಗೆಲ್ಲಾ ಇದೊಂದು ವಾದದ ವಸ್ತು, ಊಹೆ, ಕಲ್ಪನೆಯಾಗಿ ಉಳಿದುಕೊಂಡಿದೆ. ತತ್ತ್ವ ಈ ಮೂರನ್ನೂ ವಿವರಿಸಿ ಇವುಗಳ ಪರಸ್ಪರ ಸಂಬಂಧವನ್ನು ವಿವರಿಸಬೇಕಾಗಿದೆ. ಜೀವವೆಂದರೇನು, ಅದಕ್ಕೂ ಸೃಷ್ಟಿಗೂ ಇರುವ ಸಂಬಂಧವೆಂಥದು, ದೇವರಿಗೂ

ಜೀವನಿಗೂ ಮತ್ತು ದೇವರಿಗೂ ಪ್ರಪಂಚಕ್ಕೂ ಇರುವ ಸಂಬಂಧವೆಂಥದು ಎಂಬುದನ್ನು ವಿವರಿಸುವುದೇ ಎಲ್ಲಾ ತತ್ತ್ವ ಶಾಸ್ತ್ರ ಸಿದ್ಧಾಂತಗಳ ಗುರಿ.

ಈ ಪ್ರಪಂಚವನ್ನು ಸಂಸಾರ ಎಂದು ನಮ್ಮ ಹಿಂದಿನವರು ಕರೆದರು. ಇದರ ಒಂದು ಸ್ವಭಾವವೇ ಯಾವಾಗಲೂ ಬದಲಾಯಿಸುತ್ತಿರುವುದು. ಒಂದು ನದಿಯಂತೆ ಇದು. ನದಿಯ ನೀರು ಯಾವಾಗಲೂ ಹರಿದು ಹೋಗುತ್ತಿದೆ. ಹಿಂದೆ ಇದ್ದ ನೀರು ಈಗ ಇಲ್ಲ, ಈಗ ಇದ್ದ ನೀರು ಅನಂತರ ಇಲ್ಲ. ಆದರೂ ಒಂದೇ ನದಿ ಎಂಬ ಭ್ರಾಂತಿ ನಮಗೆ ಬಂದುಹೋಗಿದೆ. ಈ ಜೀವಿಗಳೆಲ್ಲಾ ಸಂಸಾರದ ಮೇಲೆ ಏಕೆ ಚಲಿಸುತ್ತಿರುವರು—ಈ ಸಂಸಾರದ ಪರಮುಗುರಿಯಾದರೂ ಎತ್ತ ಎಂಬ ಪ್ರಶ್ನೆ ಏಳುವುದು. ಈ ಸಂಸಾರದ ಮೇಲೆ ಜೀವಿಗಳು ತೇಲುತ್ತಿರುವರು. ಅವರ ಚಲನವಲನಕ್ಕೆಲ್ಲಾ ಅವರಾಸೆಯೇ ಕಾರಣ. ಆಸೆಯಿಂದ ಪ್ರೇರೇಪಿತವಾಗಿ ಈ ಜೀವಿಗಳು ಆ ಸುಖವನ್ನು ಹಿಡಿಯಲು ಧಾವಿಸುವುವು. ಈಗ ಅಳು ಈಗ ನಗು ಜೀವಿಗಳ ಪಾಲಿಗೆ ಒಂದಾದ ಮೇಲೊಂದು ಬರುತ್ತಿದೆ. ಮತ್ತೊಂದು ವಿಶೇಷವೇ ಈ ಸಂಸಾರದಲ್ಲಿ ಯಾವ ಬಾಹ್ಯ ಸುಖವೂ ಜೀವಿಗೆ ಎಂದೆಂದಿಗೂ ತೃಪ್ತಿಯನ್ನು ಕೊಡಲಾರದು. ಪ್ರತಿಯೊಂದು ಜೀವಿಯ ಹಿಂದೆಯೂ ಒಂದು ದೊಡ್ಡ ಅತೃಪ್ತಿ ಕಾದಿದೆ ಕಾಡುವುದಕ್ಕೆ. ಹೀಗೆ ಒಂದು ಜನ್ಮವಲ್ಲ, ಹಲವು ಜನ್ಮಗಳು ಜೀವಿ ಸುಖದುಃಖಗಳ ಬಲೆಗೆ ಸಿಕ್ಕಿ ವ್ಯಥೆಪಟ್ಟು ಸುಖದುಃಖಗಳಾಚೆ ಇರುವ ಸ್ಥಿತಿಯನ್ನು ಕೊನೆಕೊನೆಗೆ ಅರಸುವುದು. ಆಗಲೇ ಧರ್ಮದೇವರು ಸತ್ಯ ಇವುಗಳ ಮೇಲೆ ಜೀವಿಗೆ ಒಂದು ಆಸಕ್ತಿ ಹುಟ್ಟುವುದು. ಅನಂತರ ಸುಖದ ಬೇಟೆಯನ್ನು ಬಿಟ್ಟು ಮನ

ಸ್ಸನ್ನು ನಿಗ್ರಹಿಸಿ ಅಂತರ್ಮುಖವಾಡಿ ತನ್ನ ನಿಜತ್ವವನ್ನು ಅರಿತು ತನ್ನ ಹಿಂದೆ ಸತ್ಯಸ್ಯಸತ್ಯವಾಗಿರುವ ಭಗವಂತನೊಂದಿಗೆ ಒಂದು ಸಂಬಂಧವನ್ನು ಕಲ್ಪಿಸಿಕೊಂಡು ಸಂಸಾರದಿಂದ ಪಾರಾಗುವುದು.

ಜೀವಿ ದೇವರನ್ನು ಮೂರು ದೃಷ್ಟಿಯಿಂದ ನೋಡಬಹುದು. ಜೀವಿ ತಾನು ಬೇರೆ ದೇವರು ಬೇರೆ ಎಂದು ಭಾವಿಸುವುದು ದ್ವೈತ. ಜೀವಿ ತಾನು ಅಂಶ ದೇವರು ಪೂರ್ಣ ಎಂದು ಭಾವಿಸುವುದು ವಿಶಿಷ್ಟಾದ್ವೈತ. ಜೀವಿ ತನ್ನ ಉಪಾಧಿಗಳನ್ನೆಲ್ಲಾ ಕಳೆದುಕೊಂಡು ದೇವರಲ್ಲಿ ಒಂದಾಗಿ ಕೊನೆಗೆ ಅವನಲ್ಲಿ ತಾದಾತ್ಮ್ಯಭಾವವನ್ನು ಪಡೆಯುವುದು ಅದ್ವೈತ. ಈ ಮೂರು ಸಿದ್ಧಾಂತಗಳನ್ನು ಪ್ರತಿಪಾದಿಸುವ ಸಾಹಿತ್ಯ ಭರತಖಂಡದಲ್ಲಿ ಬೇಕಾದಷ್ಟು ಬೆಳೆದಿದೆ. ಇವುಗಳಲ್ಲಿ ಯಾವುದೋ ಒಂದೇ ಸತ್ಯ, ಉಳಿದವು ಅರ್ಧ ಸತ್ಯ ಅಥವಾ ಸುಳ್ಳು ಎಂದು ಹೇಳುವಂತಿಲ್ಲ. ಇವೆಲ್ಲಾ ಒಂದೇ ಸತ್ಯವನ್ನು ಭಿನ್ನಭಿನ್ನ ದೃಷ್ಟಿಯಿಂದ ನೋಡಿದಾಗ ಸಿಕ್ಕಿದ ದೃಶ್ಯಗಳು. ದೇಹದ ದೃಷ್ಟಿಯಿಂದ ನೋಡಿದಾಗ ಒಂದು ಚಿತ್ರ ಸಿಕ್ಕುವುದು. ಜೀವದ ದೃಷ್ಟಿಯಿಂದ ನೋಡಿದಾಗ ಒಂದು ಚಿತ್ರ ಸಿಕ್ಕುವುದು. ಆತ್ಮನ ದೃಷ್ಟಿಯಿಂದ ನೋಡಿದಾಗ ಒಂದು ದೃಶ್ಯ ಸಿಕ್ಕುವುದು. ಯಾರು ಯಾವ ಸಂಪ್ರದಾಯದಲ್ಲಿ ಬೆಳೆದಿರುವರೋ ಅದನ್ನೇ ಶ್ರದ್ಧಾ ಭಕ್ತಿಯಿಂದ ಆಚರಿಸಿದರೆ ಮುಕ್ತಿಯ ಕಡೆ ಹೋಗುವರು. ಎಲ್ಲಿಯವರೆಗೆ ವಾದಭೂಮಿಕೆಯಲ್ಲಿ ನಿಂತು ಒಂದು ಸರಿ ಒಂದು ತಪ್ಪು ಎಂದು ಹೇಳುತ್ತಿರುವೆವೋ ಅಲ್ಲಿಯವರೆಗೆ ಭಿನ್ನಾಭಿಪ್ರಾಯ ತಪ್ಪಿದ್ದಲ್ಲ. ವಾದ ತೊರೆದು ಅನುಷ್ಠಾನರಂಗದಲ್ಲಿ ಉಪಾಸನೆಯಲ್ಲಿ ಮುಳುಗಿದರೆ ಕೊನೆಗೆ ಶಾಂತಿ ದೊರಕುವುದು.

ಆಗ ಮಾತ್ರ “ ಏಕಂ ಸತ್ ವಿಪ್ರಾ ಬಹುಧಾ ವದಂತಿ ” ಎಂಬ ಸತ್ಯ ದೃಗ್ಗೋಚರವಾಗುವುದು.

ಈಗ ಜೀವ ಎಂದರೆ ಏನು ಎಂಬುದನ್ನು ತಿಳಿದುಕೊಳ್ಳಲು ಯತ್ನಿಸುವ. ನಮಗೆ ಜೀವ ಇದೆ. ಸುತ್ತುಮುತ್ತ ನೋಡುವ ಚಲಿಸುತ್ತಿರುವ ಮತ್ತು ಚಲಿಸದೆ ಇರುವ ಪ್ರಾಣಿ ಮತ್ತು ತರುಲತೆ ಮುಂತಾದುವುಗಳಲ್ಲೆಲ್ಲಾ ಜೀವ ಇದೆ. ಜೀವ ಮಾನವನಲ್ಲಿ ಮಾತ್ರ ಅಲ್ಲ ಇರುವುದು, ಸಣ್ಣದು ದೊಡ್ಡದು ಪ್ರಾಣಿ ತೃಣ ಕೀಟ ಎಲ್ಲದರಲ್ಲಿಯೂ ಇದೆ. ಆದರೆ ಎಲ್ಲಾ ಕಡೆಯಲ್ಲಿಯೂ ಅಷ್ಟೊಂದು ವಿಕಾಸವಾಗಿಲ್ಲ. ಜಡದ್ರವ್ಯ ಗಳಿಂದ ಹಿಡಿದು ಮಾನವನವರೆಗೆ ಅದು ಕ್ರಮ ಕ್ರಮೇಣ ವಿಕಾಸವಾಗುತ್ತಾ ಬಂದು ಸಿದ್ಧಮಾನವನಲ್ಲಿ ಜೀವ ತನ್ನ ಪರಾಕಾಷ್ಠತೆಯನ್ನು ಮುಟ್ಟುವುದು. ಜೀವ ಜಡವಸ್ತು ಗಳಲ್ಲಿ ನಿದ್ರಿಸುತ್ತಿದೆ, ಸಸ್ಯಪ್ರಾಣಿಗಳಲ್ಲಿ ಕನಸು ಕಾಣುವ ಸ್ಥಿತಿಯಲ್ಲಿದೆ, ಪ್ರಾಣಿಗಳಲ್ಲಿ ಜಾಗ್ರತವಾಗುತ್ತಿದೆ, ಮನುಷ್ಯ ನಲ್ಲಿ ಚೆನ್ನಾಗಿ ಪ್ರವರ್ಧಮಾನಕ್ಕೆ ಬರುತ್ತದೆ. ಅದರಲ್ಲಿಯೂ ಯಾರು ಮುಕ್ತಿಯನ್ನು ಗಳಿಸಿರುವರೋ, ಜೀವನ್ಮುಕ್ತರೋ, ಅವರಲ್ಲಿ ಜೀವ ತನ್ನ ನೈಜಸ್ಥಿತಿಯನ್ನು ಅರಿತುಕೊಳ್ಳುತ್ತದೆ.

ಈ ಜೀವಕ್ಕೆ, ಕಾರಣ ಸೂಕ್ಷ್ಮ ಮತ್ತು ಸ್ಥೂಲವೆಂಬ ಮೂರು ಹೊದಿಕೆಗಳಿವೆ. ಒಂದರ ಹಿಂದೆ ಮತ್ತೊಂದು ಇರು ವುದು. ಸ್ಥೂಲ ಬಹಳ ಬೇಗ ನಾಶವಾಗುವುದು. ಅದಕ್ಕಿಂತ ಬಹಳ ಕಾಲದ ತನಕ ಇರುವಂತಹುದು ಸೂಕ್ಷ್ಮದೇಹ. ಅದ ಕ್ಕಿಂತಲೂ ಬಹಳ ಕಾಲ ಇರುವುದು ಕಾರಣ ಶರೀರ. ಇದರ ಹಿಂದೆ ಇರುವವನು ಜೀವ. ಸ್ಥೂಲಾವಸ್ಥೆಯಲ್ಲಿ ಜೀವ ಇರು ವಾಗ ಅದಕ್ಕೆ ಹದಿನೇಳು ಭಾಗಗಳಿರುವುದು ತೋರುತ್ತದೆ.

ಅದೇ ಬುದ್ಧಿ ಮನಸ್, ಪಂಚ ಪ್ರಾಣಗಳು, ಪಂಚ ಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು. ಜೀವ ಇಂತಹ ಒಂದು ಮನೆಯಲ್ಲಿ ಇರುವುದು. ಬುದ್ಧಿ ತುಂಬಾ ಸೂಕ್ಷ್ಮವಾಗಿರುವಂತಹುದು. ಅದರ ಮೂಲಕ ನಾವು ವಿಚಾರ ಮಾಡುತ್ತೇವೆ. ಸತ್ಯ ಮಿಥ್ಯವನ್ನು ವಿಮರ್ಶಿಸುತ್ತೇವೆ. ಜೀವನಿಗೆ ಈ ಹದಿನೇಳು ವಸ್ತುಗಳೂ ಯಂತ್ರದಂತೆ. ಅವುಗಳಲ್ಲೆಲ್ಲಾ ಬಹಳ ಮುಖ್ಯವಾಗಿರುವುದೇ ಬುದ್ಧಿ. ಅನಂತರವೇ ಮನಸ್ ಬರುವುದು. ಇದನ್ನು ಚಿತ್ತ ಎಂತಲೂ ಹೇಳುವರು. ಸಂಕಲ್ಪ ವಿಕಲ್ಪ, ಭಾವನೆ, ಕಲ್ಪನೆ ಇವು ಗಳೆಲ್ಲಾ ಆಗುವುದು ಇದರಿಂದ. ಇದಾದ ನಂತರವೇ ನಮ್ಮ ದೇಹದಲ್ಲಿ ಕೆಲಸಮಾಡುತ್ತಿರುವ ಪಂಚಪ್ರಾಣಗಳು. ಅದೇ ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಎಂಬುವು. ಒಂದೇ ಪ್ರಾಣ ಐದು ಕೆಲಸಗಳನ್ನೂ ಮಾಡುತ್ತಿರುವಾಗ ಅದಕ್ಕೆ ಬೇರೆ ಬೇರೆ ಹೆಸರು ಬರುವುದು. ಒಂದೇ ವಿದ್ಯುತ್ ಶಕ್ತಿ ಬಲ್ಬಿನ ಮೂಲಕ ಬಂದಾಗ ಬೆಳಕಿನಂತೆ, ರೇಡಿಯೋ ಮೂಲಕ ಬಂದಾಗ ಶಬ್ದದಂತೆ, ಸ್ಟೌಮೂಲಕ ಬಂದಾಗ ಶಾಖದಂತೆ ಇರುವಂತೆ. ಬಾಹ್ಯ ಆವಿರ್ಭಾವ ಬೇರೆ ಬೇರೆ ಆದರೂ ಇವೆಲ್ಲಾ ಒಂದೇ ಶಕ್ತಿಯ ಲೀಲೆ. ಹಾಗೆಯೇ ಪ್ರಾಣ ಶಕ್ತಿ ನಮ್ಮ ದೇಹದಲ್ಲಿ ಹಲವು ಕ್ರಿಯೆಗಳನ್ನು ಮಾಡುತ್ತಿದೆ. ಊಟವನ್ನು ತಿನ್ನುವುದು, ಅರಗಿಸುವುದು ಅದರ ಒಂದು ಶಕ್ತಿ, ತಿಂದುದನ್ನು ಹೊರಗೆ ಕಳುಹಿಸುವುದು ಅದರ ಮತ್ತೊಂದು ಶಕ್ತಿ. ರಕ್ತಚಲನೆಯ ಹಿಂದೆ ಆ ಶಕ್ತಿಯ ಆವಿರ್ಭಾವವಿದೆ. ನರಗಳ ಚಲನೆಯ ಹಿಂದೆ ಆ ಶಕ್ತಿಯ ಆವಿರ್ಭಾವವಿದೆ. ನಮ್ಮ ದೇಹ ಬದುಕಿರಬೇಕಾದರೆ ಈ ಪ್ರಾಣಶಕ್ತಿ ಕೆಲಸ ಮಾಡುತ್ತಿರ

ಬೇಕು. ಯಾವಾಗ ಮನುಷ್ಯ ಸಾಯುವನೋ ಆಗ ನಾವು ಅವನು ಪ್ರಾಣ ಬಿಟ್ಟ ಎನ್ನುವೆವು.

ಅನಂತರವೇ ಜೀವಿಗೆ ಪಂಚಕರ್ಮೇಂದ್ರಿಯಗಳಿವೆ. ಅವೇ ಕೈ ಕಾಲು, ನಾಲಗೆ, ಗುದ ಮತ್ತು ಶಿಶ್ನ. ಇವುಗಳಿಂದ ಕರ್ಮಗಳನ್ನು ಮಾಡುತ್ತಿರುವನು. ಇವನಿಗೆ ಪಂಚ ಜ್ಞಾನೇಂದ್ರಿಯಗಳಿವೆ. ಅವೇ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ. ಇವುಗಳೇ ಜೀವನಿಗೆ ಇರುವ ಗವಾಕ್ಷಗಳು. ಜೀವಿ ಇದರ ಮೂಲಕ ವಿಷಯಗಳನ್ನು ತಿಳಿದುಕೊಳ್ಳುವನು. ಪಂಚಭೂತಗಳಿಂದ ಈ ದೇಹ ಆಗಿದೆ. ಜೀವಿ ಪಂಚಭೂತಗಳ ಸಾರವನ್ನು ಹೀರಿಕೊಂಡು ಅವನ್ನು ಜೀವಾಣುಗಳನ್ನಾಗಿ ಮಾಡಿ ಸ್ಥೂಲವಾದ ದೇಹವನ್ನು ಕಟ್ಟಿಕೊಂಡು ಇದರಲ್ಲಿ ವಾಸಿಸುವನು. ಪಂಚಭೂತಗಳಿಂದ ಜೀವ ಆದರೂ ಪಂಚಭೂತಗಳಲ್ಲಿ ಇಲ್ಲದ ಒಂದು ಜೀವಧರ್ಮವನ್ನು ಇಲ್ಲಿ ನೋಡುವೆವು. ಹೊರಗಿನ ಕಣಗಳು (atoms) ಇಲ್ಲಿ ಜೀವಾಣುಗಳಾಗುವುವು (cells). ಈ ದೇಹದ ಒಂದು ಧರ್ಮವೇ ಹುಟ್ಟುವುದು, ಬೆಳೆಯುವುದು, ಕ್ಷೀಣಿಸುವುದು ನಾಶವಾಗುವುದು. ಯಾರು ಜೀವಧಾರಿಗಳೋ ಅವರೆಲ್ಲಾ ಹುಟ್ಟಬೇಕು, ಅವರೆಲ್ಲಾ ಬೆಳೆಯಬೇಕು, ಅವರೆಲ್ಲಾ ನಾಶವಾಗಲೇಬೇಕು. ಯಾವ ದೇಹದಾರಿಯೂ ಶಾಶ್ವತವಾಗಿ ಈ ದೇಹವನ್ನು ಇಟ್ಟುಕೊಂಡಿರಲಾರ. ಈ ದೇಹದಲ್ಲಿರುವ ಜೀವನಿಗೆ ಹುಟ್ಟುಸಾವುಗಳು ಇಲ್ಲದೇ ಇದ್ದರೂ ಈ ದೇಹಕ್ಕೆ ಹುಟ್ಟುಸಾವುಗಳು ಇವೆ.

ಗೀತೆಯಲ್ಲಿ ಈ ದೇಹವನ್ನು ಒಂದು ಬಟ್ಟೆಗೆ ಹೋಲಿಸುವರು. ಯಾವಾಗ ಒಂದು ಬಟ್ಟೆ ಹಳೆಯದಾಗುವುದೋ ಆಗ ಹಳೆಯದನ್ನು ಎಸೆದು ಹೊಸದನ್ನು ಹೊಲಿಸಿಕೊಳ್ಳುವಂತೆ ಜೀವ

ಒಂದು ದೇಹದ ಮೂಲಕ ಕೆಲಸಮಾಡಿ ಆದಮೇಲೆ ಅದು ಜೀರ್ಣವಾದರೆ ಬೇರೊಂದು ದೇಹವನ್ನು ಧರಿಸುವನು.

ಸ್ಥೂಲದೇಹದ ಹಿಂದೆ ಸೂಕ್ಷ್ಮದೇಹ ಇದೆ. ಅದಕ್ಕೂ ಸೂಕ್ಷ್ಮ ರೂಪದಲ್ಲಿ ಬುದ್ಧಿ, ಮನಸ್, ಪ್ರಾಣ, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳು ಇರುತ್ತವೆ. ನಾವು ಕನಸು ಕಾಣು ವಾಗ ಅಲ್ಲಿ ನಮಗೊಂದು ದೇಹ ಇರುವುದು. ಅದು ಕೆಲಸ ಮಾಡುತ್ತಿರುತ್ತದೆ. ಹಾಗೆಯೇ ಅಲ್ಲಿಯ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ ಕೆಲಸ ಮಾಡುತ್ತಿರುತ್ತವೆ. ಮನುಷ್ಯ ಕಾಲವಾದ ಎಂದರೆ ಸ್ಥೂಲದೇಹವನ್ನು ಬಿಟ್ಟು ಹೋದ ನೆಂದು ಅರ್ಥ. ಅವನಿಗೆ ಸೂಕ್ಷ್ಮದೇಹ ಅದರ ಹಿಂದೆ ಇರುವುದು. ಅದರ ಹಿಂದೆ ಕಾರಣ ಶರೀರದಲ್ಲಿ ಜೀವ ಹುದು ಗಿರುವನು. ಜೀವಿ ದೇಹಬಿಡುವಾಗ ಮತ್ತು ಹುಟ್ಟುವಾಗ ಕಾರಣದೇಹವಿರುವ ಸೂಕ್ಷ್ಮದೇಹವನ್ನು ತಂದು ಅದರ ಮೂಲಕ ಒಂದು ಸ್ಥೂಲದೇಹವನ್ನು ರಚಿಸಿಕೊಳ್ಳುವನು.

ಸೂಕ್ಷ್ಮದೇಹದ ಹಿಂದೆಯೇ ಕಾರಣ ಶರೀರ ಇರುವುದು. ಇಲ್ಲಿಯೇ ನಾವು ಪ್ರತಿಯೊಂದು ಜನ್ಮದಲ್ಲಿ ಮಾಡಿದ ಸಂಸ್ಕಾರ ವೆಲ್ಲಾ ಸಂಗ್ರಹವಾಗಿರುವುದು. ಇದೊಂದು ಬೀಜದಂತೆ. ಬೀಜದಲ್ಲಿ ಮುಂದಾಗುವ ದೊಡ್ಡ ಮರವೆಲ್ಲಾ ಸೂಕ್ಷ್ಮರೀತಿ ಯಲ್ಲಿ ಇರುವಂತೆ ಕಾರಣಶರೀರದಲ್ಲಿ ಜೀವಿ ಸಂಗ್ರಹಿಸಿದ ಪಾಪ ಪುಣ್ಯಗಳೆಲ್ಲಾ ಶೇಖರವಾಗಿರುತ್ತವೆ. ಅವು ಎಷ್ಟು ವೇಳೆ ನಾಶವಾದರೂ ಕಾರಣಶರೀರ ನಾಶವಾಗುವುದಿಲ್ಲ. ಪ್ರಳಯ ದಲ್ಲಿ ಸೃಷ್ಟಿಯೇ ನಾಶವಾದರೂ ಕಾರಣಶರೀರ ಜೀವರೂಪದಲ್ಲಿ ಇರುವುದು. ಮತ್ತೊಂದು ಹೊಸ ಸೃಷ್ಟಿಯಲ್ಲಿ ಕಾರಣಶರೀರ ಮೊಳೆತು ಸೂಕ್ಷ್ಮ ಮತ್ತು ಸ್ಥೂಲದೇಹವನ್ನು ಧರಿಸಿ

ಬರುವುದು. ಎಂದು ಒಬ್ಬ ಮುಕ್ತನಾಗುವನೋ ಆಗ ಮಾತ್ರ ಅವನ ಕಾರಣಶರೀರ ಹುರಿದ ಬೀಜದಂತೆ ಆಗುವುದು. ಹುರಿದ ಬೀಜ ಮತ್ತೊಮ್ಮೆ ಮೊಳೆಯುವುದಿಲ್ಲ. ಅದೇ ಅದರ ಕೊನೆಯ ಅವಸ್ಥೆ.

ಜೀವಿಗಳು ಪುನಃ ಪುನಃ ಸಂಸಾರ ಚಕ್ರಕ್ಕೆ ಸಿಕ್ಕುವುದಕ್ಕೆ ಬೇರೆ ಬೇರೆ ದೇಹಗಳನ್ನು ಧರಿಸುವುದಕ್ಕೆ ಕಾರಣ ಅವು ಪ್ರತಿಯೊಂದು ಜನ್ಮದಲ್ಲಿಯೂ ಸಂಪಾದಿಸುವ ಪಾಪಪುಣ್ಯಗಳು. ಇದನ್ನೇ ಹಿಂದುಗಳು ಕರ್ಮಸಿದ್ಧಾಂತ ಎನ್ನುವುದು. ಈ ಕರ್ಮಸಿದ್ಧಾಂತವನ್ನು ಜೈನರು, ಬೌದ್ಧರು ಕೂಡ ಒಪ್ಪುವರು. ಹೇಗೆ ಹೊರಗಿನ ಬಾಹ್ಯಪ್ರಪಂಚದಲ್ಲಿ ಒಂದು ಕಾರ್ಯಕಾರಣ ಸಂಬಂಧ ಇದೆಯೋ ಹಾಗೆಯೇ ಪ್ರತಿಜೀವಿಯ ಈಗಿರುವ ಸ್ಥಿತಿಗೆ ಅವನು ಹಿಂದೆ ಮಾಡಿರುವುದೇ ಕಾರಣವಾಗಿದೆ. ಯಾವ ಆಲೋಚನೆಯನ್ನು ನಾವು ಮಾಡಲಿ, ಕರ್ಮವನ್ನು ಮಾಡಲಿ, ಅದರ ಪರಿಣಾಮ ಪುನಃ ನಮ್ಮ ಮನಸ್ಸಿನಲ್ಲಿ ಬಂದು ನೆಲಸುವುದು. ಸೂಕ್ಷ್ಮಸಂಸ್ಕಾರದಂತೆ ಅದು ನಮ್ಮ ಮನಸ್ಸಿನ ಅಂತರಾಳದಲ್ಲಿ ಸಂಗ್ರಹವಾಗಿರುವುದು. ಅದಕ್ಕೆ ಒಂದು ಸರಿಯಾದ ವಾತಾವರಣ ಬಂದೊಡನೆಯೇ ಆ ಸಂಸ್ಕಾರದ ಬೀಜಗಳು ಬೇರು ಬಿಟ್ಟು ಪುನಃ ಬಂದು ಕರ್ಮದಲ್ಲಿ ಪರ್ಯವಸಾನವಾಗಿ ಬೀಜ ಬಿಟ್ಟು ನಮ್ಮ ಮನಸ್ಸಿನಲ್ಲಿ ಬಂದು ಅಡಗುವುವು. ನಮ್ಮ ಪಾಲಿಗೆ ಏನು ಒಳ್ಳೆಯದು ಬರಲಿ, ಕೆಟ್ಟದ್ದು ಬರಲಿ ಅದಕ್ಕೆ ಹಿಂದುಗಳು ಇತರರನ್ನು ದೂರುವುದಿಲ್ಲ. ಜವಾಬ್ದಾರಿ ತನ್ನದೆ ಎಂದು ಹೇಳಿಕೊಳ್ಳುವನು. ನಾವು ಯಾವ ಬೀಜ ಬಿತ್ತಿದರೆ ಅಂತಹ ಬೆಳೆ ನಮಗೆ ಕಾದಿದೆ. ನೆಗ್ಗಿಲು ಮುಳ್ಳು ಬಿತ್ತಿ ಕಡಲೆಕಾಯಿಯನ್ನು ಅಗೆಯಲು ಹೋದರೆ

ಸಿಕ್ಕುವುದಿಲ್ಲ. ಜೀವಿ ಇತರರಿಗೆ ಕಷ್ಟಕೊಟ್ಟು, ಕಣ್ಣೀರು ಸುರಿಸುವಂತೆಮಾಡಿ ಅನ್ಯಾಯದಿಂದ ಬಾಳಿದರೆ ಅಂತಹ ದುರವಸ್ಥೆಯೇ ಇದನ್ನು ಕೊಟ್ಟವನಿಗೂ ಕಾದಿರುವುದು. ಕರ್ಮ ನಿಯಮವುವನ್ನು ಯಾರೂ ಮೀರಿಹೋಗಲಾರರು. ಬಾಹ್ಯ ಪ್ರಪಂಚದಲ್ಲಿ ಯಾವುದಾದರೂ ಕಳವೋ ಕೊಲೆಯೋ ಮಾಡಿ ಬಹಳ ಬುದ್ಧಿವಂತರಾದ ವಕೀಲರನ್ನು ಇಟ್ಟು ಕೋರ್ಟಿನಿಂದ ಯಾವ ಅಪಾಯವೂ ಇಲ್ಲದಂತೆ ಬರುವುದು ಸುಲಭ. ಆದರೆ ಕರ್ಮದ ಕೋರ್ಟಿನಲ್ಲಿ ಯಾರೂ ಕರ್ಮದೇವತೆಯ ಕಣ್ಣನ್ನು ಕಟ್ಟಲಾರರು. ಕರ್ಮ ನಿಯಮ ಚಿರ ಜಾಗ್ರತವಾಗಿ ಕೆಲಸಮಾಡುತ್ತಿದೆ. ಬಾಹ್ಯ ಪ್ರಪಂಚದಲ್ಲಿ ಸಣ್ಣಸಣ್ಣ ಕಣಗಳಿಂದ ಹಿಡಿದು ಸೂರ್ಯಚಂದ್ರ ತಾನೀಹಾರಿಕೆಗಳನ್ನು ತನ್ನ ವಜ್ರಮುಷ್ಟಿಯಲ್ಲಿ ಹಿಡಿದುಕೊಂಡು ಒಂದು ನಿಯಮಕ್ಕೆ ಬಾಗಿ ಸಂಚರಿಸುವಂತೆ ಮಾಡಿದ ಆಕರ್ಷಣ ಶಕ್ತಿಗಿಂತ ಮಿಗಿಲಾದುದು ಈ ಕರ್ಮಸಿದ್ಧಾಂತ.

ಕರ್ಮಸಿದ್ಧಾಂತವನ್ನು ಒಪ್ಪಿಕೊಂಡರೆ ಈ ಒಂದು ತೊಂದರೆ ನಮಗೆ ಎದ್ದು ಕಾಣುವುದು. ಒಬ್ಬ ಪುಣ್ಯವಂತನಾಗಿ ಹುಟ್ಟುವನು. ಅವನ ಸ್ವಭಾವ ಪುಣ್ಯದ ಕಡೆಗೆ. ಅವನು ಪುಣ್ಯ ಕೆಲಸಗಳನ್ನೇ ಮಾಡುತ್ತಾ ಹೋಗುವನು. ಇದರಿಂದ ಅವನು ಹೆಚ್ಚು ಹೆಚ್ಚು ಪುಣ್ಯವಂತನಾಗುತ್ತಾ ಬರುವನು. ಮತ್ತೊಬ್ಬ ಪಾಪಿ ಹುಟ್ಟುವನು. ಅವನ ಸ್ವಭಾವವೆಲ್ಲಾ ಪಾಪದ ಕಡೆಗೆ. ಅವನು ದಿನ ಬೆಳಗಾದರೆ ಪಾಪ ಕರ್ಮಗಳನ್ನೇ ಮಾಡುತ್ತಾ ಹೋಗಿ ಕೊನೆಗೆ ಮಹಾಪಾಪಾತ್ಮನಾಗುವನು. ಹೀಗಿದ್ದರೆ ಈ ಕರ್ಮ ನಿಯಮವು ಕಠೋರವಾಗುವುದು. ಪಾಪಿ ಪುಣ್ಯವಂತನಾಗಲು ಸ್ವಾತಂತ್ರ್ಯವಿಲ್ಲವೆ? ಅವಕಾಶವಿಲ್ಲವೆ? ಎಂಬ ಪ್ರಶ್ನೆ

ಏಳುವುದು. ನಮ್ಮ ಧರ್ಮಗಳು ಅವಕಾಶ ಇದೆ ಎನ್ನುವುವು. ನಾವು ಒಂದು ಕೆಟ್ಟ ಕರ್ಮವನ್ನು ಮಾಡಿದರೆ ಅದರ ಫಲವನ್ನು ಅನುಭವಿಸಬೇಕು ನಿಜ. ಆದರೆ ಆ ಯಾತನಾಮಯವಾದ ಫಲವನ್ನು ಅನುಭವಿಸುವಾಗ ನಮ್ಮ ಮನಸ್ಸಿನ ಮೇಲೆ ಪ್ರತಿಕ್ರಿಯೆಯಾಗುವುದು. ನಾನು ಮತ್ತೊಬ್ಬರಿಗೆ ಕೊಟ್ಟ ಯಾತನೆಯಿಂದ ನಾನೀಗ ಯಾತನೆ ಪಡುತ್ತಿರುವೆನು. ಹಾಗೆ ಮಾಡಿದ್ದು ತಪ್ಪು. ಇನ್ನೊಮ್ಮೆ ಮಾಡದೆ ಇರುವುದಕ್ಕೆ ಪ್ರಯತ್ನಿಸುತ್ತೇನೆ ಎಂದು ನಾವು ಸಂಕಲ್ಪ ಮಾಡಿಕೊಳ್ಳಬಹುದು. ಇದು ನಮ್ಮ ಹೀನ ಸಂಸ್ಕಾರವನ್ನು ತಗ್ಗಿಸುವುದು. ಪಶ್ಚಾತ್ತಾಪ ಮತ್ತು ಪ್ರಾಯಶ್ಚಿತ್ತ ನಾವು ಮಾಡಿದ ಪಾಪಕರ್ಮದ ಪರಿಣಾಮವನ್ನು ನಮ್ಮಲ್ಲಿ ಕಡಿಮೆಮಾಡುವುದು. ಹೀಗೆ ಮಾಡುತ್ತಿದ್ದರೆ ಎಂತಹ ಪಾಪಿಯಾಗಲಿ ಒಂದಲ್ಲ ಒಂದು ದಿನ ಪುಣ್ಯವಂತನಾಗುವ ಕಾಲಬರುವುದು. ಅನೇಕ ಭಕ್ತರ, ಸಾಧುಸಂತರ ಜೀವನದಲ್ಲಿ ನಾವು ಇದನ್ನು ನೋಡುತ್ತೇವೆ. ಅದಕ್ಕೇ ಋಷಿಮೂಲವನ್ನು ಹುಡುಕಲು ಯತ್ನಿಸಬೇಡ ಎಂಬ ನಾಣ್ನುಡಿ ಇದೆ. ಏಕೆಂದರೆ ಅವನ ಮೂಲವನ್ನು ನೋಡಿದರೆ ನಾವು ಈಗ ಆ ಮಹಾವ್ಯಕ್ತಿಯನ್ನು ಯಾವ ಪೂಜ್ಯದ ದೃಷ್ಟಿಯಿಂದ ನೋಡುತ್ತಿರುವೆವೋ ಅದು ಮಾಯವಾಗುವ ಪ್ರಸಂಗ ಬಂದರೂ ಬರಬಹುದು. ವಾಲ್ಮೀಕಿ ಮಹಾಋಷಿಯಾಗುವುದಕ್ಕೆ ಮುಂಚೆ ಕಾಡಿನಲ್ಲಿ ಪ್ರಯಾಣಿಕರನ್ನು ಸುಲಿಗೆ ಮಾಡುತ್ತಿದ್ದ ದರೋಡೆಕಾರನಾಗಿದ್ದ. ಆದರೆ ನಾರದರ ಪ್ರಭಾವಕ್ಕೆ ಸಿಕ್ಕಿ ತನ್ನ ಹೀನ ಜೀವನವನ್ನು ಮಾರ್ಪಡಿಸಿಕೊಂಡು ಮಹಾಜ್ಞಾನಿಯಾದ, ಕವಿಯಾದ, ಋಷಿಯಾದ. ಇಂತಹ ಡಕಾಯಿತನೇ ಅಂತಹ ಮಹಾನುಭಾವನಾದರೆ ಸಾಧಾರಣ ಮನುಷ್ಯರು ಹಾಗೆ

ಆಗುವುದಕ್ಕೆ ಬೇಕಾದಷ್ಟು ಭರವಸೆ ಇದೆ ಎಂಬುವನ್ನು ಕೂಡ ಇದು ತೋರುವುದು. ಕರ್ಮಸಿದ್ಧಾಂತ ಜೀವಿಯನ್ನು ಹೊರಗೆ ಬರಲಾರದ ಸೆರೆಮನೆಯಲ್ಲಿ ಸಿಕ್ಕಿಸಿ ನರಳಿಸುವಂತಹುದಲ್ಲ. ಆ ಸೆರೆಮನೆಯಿಂದ ಹೊರಗೆ ಬರಲು ಒಂದು ದಾರಿಯನ್ನೂ ಅದೇ ಸಿದ್ಧಾಂತ ತೋರುವುದು. ಕರ್ಮ ಸಿದ್ಧಾಂತವನ್ನು ಟೀಕಿಸುವ ಅನೇಕ ಜನ ಈ ಭಾಗವನ್ನೇ ಮರೆತಂತೆ ಇದೆ. ಯಾವಾಗ ನಾವು ಕರ್ಮಸಿದ್ಧಾಂತವನ್ನು ಒಪ್ಪಿಕೊಳ್ಳು ತ್ತೇವೆಯೋ ಆಗ ಜೀವಕ್ಕೆ ಹಿಂದೆ ಎಷ್ಟೋ ಜನ್ಮಗಳಾಗಿ ಹೋಗಿವೆ. ಮುಂದೆಯೂ ಮುಕ್ತಿ ಪಡೆಯುವ ತನಕ ಜನ್ಮಗಳು ಕಾದುಕೊಂಡಿವೆ ಎನ್ನುವುದು ತರ್ಕ ಬದ್ಧವಾಗಿದೆ. ಹಿಂದೂ ಬೌದ್ಧ ಜೈನ ಧರ್ಮಗಳು ಪುನರ್ಜನ್ಮ ಸಿದ್ಧಾಂತವನ್ನು ಒಪ್ಪಿಕೊಳ್ಳುತ್ತವೆ. ಕ್ರಿಸ್ತ ಮಹಮ್ಮದೀಯ ಮುಂತಾದ ಧರ್ಮ ಗಳು ಒಪ್ಪಿಕೊಳ್ಳುವುದಿಲ್ಲ.

ಹಿಂದೂ ಪುನರ್ಜನ್ಮ ಸಿದ್ಧಾಂತವನ್ನು ಒಪ್ಪಿಕೊಳ್ಳುವುದಕ್ಕೆ ಹಲವು ಕಾರಣಗಳನ್ನು ಕೊಡುವನು. ಅದರಲ್ಲಿ ಒಂದೇ ಮಾನವ ಪೂರ್ಣತೆಯನ್ನು ಪಡೆಯಬೇಕು. ಅದೇ ಅವನ ಗುರಿ. ಅದರೆಡೆಗೆ ಮಾನವ ತಿಳಿದೋ ತಿಳಿಯದೆಯೋ ಪ್ರಯಾಣ ಮಾಡುತ್ತಿರುವನು. ಆದರೆ ಒಂದೇ ಜನ್ಮದಲ್ಲಿ ಅದನ್ನು ಗಳಿಸ ಲಾಗುವುದಿಲ್ಲ. ಎಲ್ಲೊ ಸ್ವಲ್ಪ ಈ ಜನ್ಮದಲ್ಲಿ ಸಾಧಿಸಿದ್ದರೆ ಅದನ್ನು ಪೂರೈಸಲು ಅವನಿಗೊಂದು ಅವಕಾಶಕೊಡಬೇಕು. ಅದಕ್ಕಾಗಿ ಪುನರ್ಜನ್ಮ ಆವಶ್ಯಕ. ಯಾವಾಗ ನಾವು ಮುಂದಿನ ಜನ್ಮವನ್ನು ಒಪ್ಪಿಕೊಳ್ಳುತ್ತೇವೆಯೋ ಆಗ ಹಿಂದಿನ ಜನ್ಮ ವನ್ನೂ ಒಪ್ಪಿಕೊಳ್ಳಬೇಕಾಗುವುದು. ಈ ಜನ್ಮದಲ್ಲಿ ನಮ್ಮಲ್ಲಿ ಹಲವು ಆಸೆ ಆಕಾಂಕ್ಷೆ ಮತ್ತು ಸಂಸ್ಕಾರಗಳಿವೆ. ಅವನ್ನೆಲ್ಲಾ

ಈ ಜನ್ಮದಲ್ಲಿಯೇ ಸಂಗ್ರಹಿಸಿದೆ ಎಂದು ಹೇಳಲಾಗುವುದಿಲ್ಲ. ಹಾಗಾದರೆ ಅವೆಲ್ಲಾ ಎಲ್ಲಿಂದ ಬಂದಿರಬೇಕು? ಅದೆಲ್ಲಾ ಹಿಂದೆ ನಾನೇ ಮಾಡಿದ್ದಿರಬೇಕು ಎಂದು ಊಹಿಸುವುದು. ಈ ಸಿದ್ಧಾಂತ ಜೀವಿಯ ಸ್ಥಿತಿಗೆ ತಂದೆತಾಯಿಗಳನ್ನಾಗಲಿ ದೇವರನ್ನಾಗಲಿ ಗುರಿಪಡಿಸುವುದಿಲ್ಲ. ಜವಾಬ್ದಾರಿಯನ್ನು ತಾನೇ ತೆಗೆದುಕೊಳ್ಳುವುದು. ನಮ್ಮ ಎಡವಟ್ಟಿಗೆ ನಮ್ಮ ತಂದೆತಾಯಿಗಳು ಕಾರಣರಾದರೆ ನಾನು ಮಾಡಿದ ಪಾಪವೇನು? ಪ್ರಥಮವೇಳೆ ನಾನು ಪ್ರಪಂಚಕ್ಕೆ ತಂದೆತಾಯಿಗಳ ಮೂಲಕ ಬಂದರೆ ನನ್ನ ಲೋಪದೋಷಕ್ಕೆ ತಂದೆತಾಯಿಗಳನ್ನು ಗುರಿಮಾಡುವುದು ತರ್ಕಬದ್ಧವಲ್ಲ, ನ್ಯಾಯವೂ ಅಲ್ಲ, ಧರ್ಮವೂ ಅಲ್ಲ. ಬಾಹ್ಯ ಕೋರ್ಟಿನಲ್ಲಿಯೇ ತಂದೆಯ ಪಾತಕಕ್ಕೆ ಮಕ್ಕಳನ್ನು ಶಿಕ್ಷಿಸುವುದಿಲ್ಲ. ಹೀಗಿರುವಾಗ ಪ್ರಥಮಬಾರಿ ಯಾವ ಪಾತಕವನ್ನೂ ಹಿಂದೆ ಜನ್ಮವಿಲ್ಲದೇ ಇದ್ದುದರಿಂದ ಮಾಡಿಲ್ಲದ ಮಗು ಕಷ್ಟನಷ್ಟವನ್ನು ಅನುಭವಿಸುವುದಕ್ಕೆ ಕಾರಣ ಕೊಡಲಾಗುವುದಿಲ್ಲ. ಒಂದುವೇಳೆ ಇದಕ್ಕೆಲ್ಲಾ ದೇವರೇ ಕಾರಣನೆಂದರೆ ಅಂತಹ ದೇವರು ಪಕ್ಷಪಾತಿಯಾಗುವನು. ಒಬ್ಬನನ್ನು ದಡ್ಡನನ್ನಾಗಿ ಕುರೂಪಿಯನ್ನಾಗಿ ದೇವರು ಏತಕ್ಕೆ ಮಾಡಿದ? ಅವನಿಗೆ ಏತಕ್ಕೆ ಕೆಲವರ ಮೇಲೆ ಅಸೂಯೆ? ಮಾನವರಲ್ಲಿ ಈ ಗುಣವನ್ನು ನೋಡಿದರೆ ನಾವು ಸುಮ್ಮನೆ ಬಿಡುವುದಿಲ್ಲ. ಹೀಗಿರುವಾಗ ದೇವರಲ್ಲೇ ಈ ದುರ್ಗುಣವಿದ್ದರೆ ಅಂತಹ ದೇವರು ಪೂಜಿಸುವುದಕ್ಕೂ ಯೋಗ್ಯನಲ್ಲ ಎನ್ನಬೇಕಾಗುವುದು. ಆದಕಾರಣವೇ ಜೀವಿಗಳು ಅನಾದಿ, ಅವು ಇಲ್ಲಿಗೆ ಬರುವಾಗಲೇ ಕೆಲವು ಕರ್ಮದ ಬುತ್ತಿಯನ್ನು ತಂದಿರುತ್ತವೆ. ಅದನ್ನು ಈ ಜನ್ಮದಲ್ಲಿ ತಿನ್ನಬೇಕಾಗುವುದು. ಇಲ್ಲಿ ದೇವರು ಕರ್ಮಫಲ

ವನ್ನು ಕೊಡುವವನೇ ಹೊರತು ಬೇರಲ್ಲ. ಈ ದೃಷ್ಟಿಯಿಂದ ಪುನರ್ಜನ್ಮಸಿದ್ಧಾಂತ ನ್ಯಾಯಬದ್ಧವಾದುದೆಂದು ನೋಡ ಬಹುದು.

ಯಾರು ಪುನರ್ಜನ್ಮ ಸಿದ್ಧಾಂತವನ್ನು ನಂಬುವುದಿಲ್ಲವೋ ಅವರಲ್ಲಿ ಮುಂದೆ ಬರುವ ಆಕ್ಷೇಪಣೆಗೆ ತಕ್ಕ ಪರಿಹಾರವನ್ನು ಕೊಡಲು ಸಾಧ್ಯವಿಲ್ಲ. ನಾವು ಬರುವುದು ಇದೇ ಮೊದಲಾದರೆ ಮತ್ತು ನಾವು ಕಾಲವಾದಮೇಲೆ ಪುನಃ ನಮಗೆ ನಮ್ಮನ್ನು ತಿದ್ದಿಕೊಳ್ಳುವುದಕ್ಕೆ ಅವಕಾಶ ಸಿಕ್ಕದೇ ಇದ್ದರೆ, ಅವರ ಗತಿ ಏನಾಗುವುದು? ಯಾರು ಒಳ್ಳೆಯದನ್ನು ಮಾಡಿರುವರೋ ಅವರನ್ನು ಸ್ವರ್ಗಕ್ಕೆ ಹಾಕುವರು. ಯಾರು ಕೆಟ್ಟದ್ದನ್ನು ಮಾಡಿರು ವರೋ ಅವರನ್ನು ಎಂದೆಂದಿಗೂ ನರಕಕ್ಕೆ ತಳ್ಳಿದರೆ ಒಂದು ಜನ್ಮದಲ್ಲಿ ಮಾಡಿದ ಪಾಪಕ್ಕೆ ಅನಂತಕಾಲದವರೆಗೆ ನರಕದ ಲ್ಲಿಯೇ ನರಳುತ್ತಿರಬೇಕಾಗುವುದು. ಮಿತವಾದ ತಪ್ಪಿಗೆ ಅಮಿತ ವಾದ ಶಿಕ್ಷೆ ಆಯಿತು. ಈ ಪ್ರಪಂಚದ ನ್ಯಾಯಾಸ್ಥಾನದಲ್ಲಿಯೇ ಜೀವಾವಧಿ ಶಿಕ್ಷೆ ಎಂದರೆ ಸುಮಾರು ಹದಿನೆಂಟು ವರುಷಗಳು ಜೈಲಿನಲ್ಲಿ ಕೊಳೆಯಬೇಕು ಅಷ್ಟೆ. ಅಲ್ಲಿದ್ದರೂ ಪ್ರತಿವರ್ಷಕ್ಕೂ ಜೈಲಿನಲ್ಲಿ ನಾವು ಸರಿಯಾಗಿ ನಡೆದುಕೊಂಡರೆ ವರುಷಕ್ಕೆ ಒಂದು ತಿಂಗಳೋ ಹದಿನೈದು ದಿನವೋ ಸೋಡಿ ಸಿಕ್ಕುವುದು. ಆದರೆ ದೇವರ ನ್ಯಾಯಾಸ್ಥಾನ ಇದಕ್ಕಿಂತ ಕೇಡಾಗುವುದು.

ಮಾನವ ಉದ್ಧಾರವಾಗಲು ಒಂದೇ ಜನ್ಮ ಸಾಲದು. ಒಂದು ಜನ್ಮದಲ್ಲಿ ಒಬ್ಬ ಬೇಕಾದಷ್ಟು ಪ್ರಯತ್ನ ಮಾಡಿದರೆ ಸ್ವಲ್ಪ ಉತ್ತಮನಾಗಬಹುದು. ಅಂತಹವನು ಕಾಲವಾದರೆ ಏನಾಗುತ್ತಾನೆ ಎಂಬ ಪ್ರಶ್ನೆ ಏಳುವುದು. ಮುಕ್ತನಾಗುವಷ್ಟು ಒಳ್ಳೆಯದನ್ನು ಮಾಡಿರುವುದಿಲ್ಲ, ನರಕದಲ್ಲಿ ಬಿಸಾಡುವಷ್ಟು

ಕೆಟ್ಟದನ್ನೂ ಮಾಡಿರುವುದಿಲ್ಲ. ಅವನನ್ನು ಸ್ವರ್ಗಕ್ಕೆ ಹಾಕಿದರೆ, ಸ್ವಲ್ಪ ಒಳ್ಳೆಯದು ಇದ್ದರೆ ಸಾಕು ಅವನಿಗೆ ಸ್ವರ್ಗ ಸಿಕ್ಕುವುದು. ಒಬ್ಬ ಯೋಗ್ಯನಲ್ಲದೆ ಇದ್ದರೂ ಅವನಿಗೆ ಪಾಸ್ ಕೊಟ್ಟಂತೆ ಆಗುವುದು. ಇಲ್ಲಿಯೂ ದೇವರು ಟೀಕೆಗೆ ಒಳಗಾಗಬೇಕಾಗುವುದು. ಹುಟ್ಟುವಾಗಲೇ ಕೆಲವರಿಗೆ ಯಾವುದಾದರೂ ಅಂಗ ಹೀನವೋ ಏನೋ ಆಗಿ ಹುಟ್ಟುವರು. ಇದೇ ಪ್ರಥಮಬಾರಿ ಮಗು ಪ್ರಪಂಚಕ್ಕೆ ಬಂದರೆ ಅದೇನೂ ಹಿಂದೆ ಪಾಪ ಮಾಡಿರುವುದಿಲ್ಲ ಎಂದು ಒಪ್ಪಿಕೊಳ್ಳಬೇಕಾಗುವುದು. ಹಾಗಾದರೆ ಅದು ಏತಕ್ಕೆ ಹಾಗೆ ಆಗಬೇಕು? ದೇವರೇ ಅದನ್ನು ಮಾಡಿದ್ದರೆ ಆ ದೇವರು ಈ ಜೀವಿಯಮೇಲೆ ಏತಕ್ಕೆ ಸೇಡನ್ನು ತೀರಿಸಿಕೊಳ್ಳಬೇಕು. ಮತ್ತೆ ಕೆಲವರು ತಂದೆತಾಯಿಗಳು ಪಾಪ ಮಾಡಿರುವುದರಿಂದ ಅವರಿಗೆ ದುಃಖವನ್ನು ಕೊಡುವುದಕ್ಕಾಗಿ ಇಂತಹ ಮಕ್ಕಳನ್ನು ದೇವರು ಕೊಡುತ್ತಾನೆ ಎನ್ನುವರು. ಆದರೆ ತಂದೆ ತಾಯಿಗಳು ಮಾತ್ರವಲ್ಲ ಅನುಭವಿಸುವುದು, ಯಾವ ಪಾಪವನ್ನೂ ಮಾಡದೇ ಇದ್ದರೂ ಮಗು ಈ ಯಾತನೆಯನ್ನು ಅನುಭವಿಸಬೇಕಾಗುವುದು. ಯಾರೋ ಮಾಡಿದ ತಪ್ಪಿಗೆ ಯಾರಿಗೋ ಶಿಕ್ಷೆ. ಇದೆಂತಹ ನ್ಯಾಯ! ಮಗು ಹುಟ್ಟುತ್ತಲೇ ಅಥವಾ ಕೆಲವು ದಿನಗಳಲ್ಲಿ ಸತ್ತುಹೋಗುವುದು. ಅದರ ಗತಿ ಏನು? ಅದೇನು ಸ್ವರ್ಗಕ್ಕೆ ಹೋಗುವುದೋ ನರಕಕ್ಕೆ ಹೋಗುವುದೋ? ಅದಕ್ಕೇ ಒಂದು ಜನ್ಮದಲ್ಲಿ ನಂಬುವವರು ಮಗು ಏನೂ ಪಾಪವನ್ನು ಮಾಡದೇ ಇರುವುದರಿಂದ ಸ್ವರ್ಗಕ್ಕೆ ಹೋಗುವುದು ಎನ್ನುವರು. ಆದರೆ ಏನೂ ಪಾಪವನ್ನು ಮಾಡಿಲ್ಲ ಎಂದರೆ ಪುಣ್ಯವನ್ನು ಮಾಡಿದಂತೆ ಆಗುವುದೆ? ಬೇಕಾದಷ್ಟು ಪುಣ್ಯ ಮಾಡಿದವನಿಗೂ ಒಂದೇ ಲೋಕ, ಯಾವ

ಪುಣ್ಯವನ್ನೂ ಇನ್ನೂ ಮಾಡದೇ ಇರುವವನಿಗೂ ಒಂದೇ ಲೋಕ. ಹಾಗಿದ್ದರೆ ಹುಟ್ಟಿದ ಮಕ್ಕಳೆಲ್ಲರನ್ನೂ ಪಾಪ ಮಾಡುವುದಕ್ಕೆ ಮುಂಚೆ ಸಾಯುವಂತೆ ಮಾಡಿದರೆ ಅವೆಲ್ಲಾ ಸ್ವರ್ಗಕ್ಕೆ ಹೋಗುವುವು! ಹೀಗೆ ಮಾಡುವುದೊಂದು ಪುಣ್ಯ ಕೆಲಸವಾಗಬಹುದಲ್ಲ!

ಜೀವಿಯಲ್ಲಿರುವ ವೈವಿಧ್ಯತೆಗೆ ಒಂದು ಜನ್ಮದ ಆಧಾರದ ಮೇಲೆ ಮಾತ್ರ ನಿಂತು ವಿವರಣೆ ಕೊಡಲಾರೆವು. ಒಬ್ಬ ಬುದ್ಧಿವಂತ ಒಬ್ಬ ದಡ್ಡ ಇವರೆಲ್ಲ ಪ್ರಪಂಚಕ್ಕೆ ಇದೇ ಪ್ರಥಮಬಾರಿ ಬಂದರೆ ಈ ವೈವಿಧ್ಯತೆಗೆ ಕಾರಣಕರ್ತರು ಯಾರು? ದೇವರೆ ಆದರೆ ಅಂಥ ದೇವರು ಪಕ್ಷಪಾತಿಯಾಗುತ್ತಾನೆ. ಏನೋ ಆಕಸ್ಮಾತ್ ಹಾಗೆ ಆಯಿತು ಎಂದರೆ, ದೇವರು ಎಚ್ಚರ ತಪ್ಪಿದಾಗ ಹೀಗೆ ಆಯಿತು ಎಂದಂತೆ ಆಗುವುದು. ಅದೂ ದೇವರನ್ನು ದೋಷರಹಿತನನ್ನಾಗಿ ಮಾಡಲಾರದು.

ಆದಕಾರಣವೆ ಹಿಂದು ಕೊಡುವ ವಿವರಣೆ ನ್ಯಾಯಬದ್ಧವಾಗಿದೆ, ತಾರ್ಕಿಕವಾಗಿದೆ. ನಮ್ಮ ಲೋಪದೋಷಕ್ಕೆ ದೇವರನ್ನು ಗುರಿಮಾಡುವುದಿಲ್ಲ. ಜೀವಿಯ ವೈವಿಧ್ಯತೆಗೆಲ್ಲ ಹೊರೆ ಹೊಣೆಗಳು ಜೀವಿಯೆ ಮಾಡಿಕೊಂಡದ್ದು ಎಂದು ಸಾರುವುದು. ಒಂದೇ ಜನ್ಮದಲ್ಲಿ ಎಲ್ಲರಿಗೂ ಮುಕ್ತರಾಗಲು ಸಾಧ್ಯವಿಲ್ಲ. ಹಲವಾರು ಅನುಭವಗಳನ್ನು ಪಡೆದಾದಮೇಲೆ ಈ ಸಂಸಾರ ಒಂದು ದುಃಖದ ಕೊಂಪೆ ಎಂಬುದನ್ನು ಜೀವಿ ಅರಿತು ದೇವರ ಕಡೆಗೆ ಹೋಗಬೇಕಾಗುವುದು. ಬಂಧನದಿಂದ ಮುಕ್ತಿಯ ಕಡೆಗೆ ಇರುವ ಯಾತ್ರೆ ಒಂದು ಜನ್ಮದಲ್ಲಿ ಪೂರೈಸುವಂತಹುದಲ್ಲ. ಜನ್ಮ ಜನ್ಮಗಳು ಬೇಕು ಇದಕ್ಕೆ. ಇದೊಂದು ದೀರ್ಘ ಯಾತ್ರೆ. ಪೂರ್ಣತೆಯನ್ನು ಪಡೆಯುವವರೆಗೂ ನಾವು ಬಂದು ಹೋಗುತ್ತಿರಬೇಕಾಗುವುದು.

ಈಗ ಆಧುನಿಕ ವೈಜ್ಞಾನಿಕರ ಕೆಲವು ವಾದಗಳನ್ನು ಗಮನಿಸುವ. ಕೇವಲ ಜಡವಾದಿಗಳು (Materialists) ದೇಹ ವಿಲ್ಲದ ಜೀವನವನ್ನು ಒಪ್ಪಿಕೊಳ್ಳುವುದೇ ಇಲ್ಲ. ನಾವು ಯಾವುದನ್ನು ಜೀವ (Soul) ಎನ್ನುವೆವೊ ಇದೊಂದು ಭ್ರಾಂತಿ. ದೇಹ ಕಳೆದ ಮೇಲೆ ಏನೂ ಉಳಿಯುವುದಿಲ್ಲ. ಯಾವುದನ್ನು ನೀವು ಜೀವ ಎನ್ನುವಿರೊ ಅದೊಂದು ತಾತ್ಕಾಲಿಕವಾಗಿ ವ್ಯಕ್ತವಾಗುವ ಒಂದು ಭೌತಿಕಶಕ್ತಿ (Physical force). ಅದು ಸತ್ತ ಮೇಲೆ ದೇಹ ತಣ್ಣಗಾಗುವುದು. ಒಂದು ದೀಪ ಎಣ್ಣೆ ಮುಗಿದು ಆರಿಹೋದರೆ ಆ ದೀಪ ಎಲ್ಲಿ ಹೋಯಿತು ಎಂದು ಕೇಳುವಂತೆ. ಆ ದೀಪ ಎಲ್ಲಿಯು ಹೋಗಲಿಲ್ಲ. ಅದು ಇಲ್ಲದಾಯಿತು ಎನ್ನುವನು ವಿಜ್ಞಾನಿ. ಜೀವ ಎನ್ನುವುದು ಕೇವಲ ಭೌತಿಕ ಘಟನೆ ಎಂದು ಸಾರುವರು. ಕೆಲವು ಜೀವಿ ಗಳನ್ನು ಪ್ರಯೋಗಶಾಲೆಯಲ್ಲಿ ಕೆಲವು ಭೌತವಸ್ತುಗಳನ್ನು ಮಿಶ್ರಮಾಡಿ ತೋರಿಸಿದಾಗ ಅವರನ್ನು ನಂಬಬಹುದು. ಅಲ್ಲಿಯ ವರೆಗೆ ಅವರ ವಾದಕ್ಕೆ ಯಾವ ಆಧಾರವೂ ಇಲ್ಲ. ದೇಹ ಎನ್ನುವುದು ಒಂದು ಯಂತ್ರ ಎಂದು ಭಾವಿಸಿದರೂ ಆ ಯಂತ್ರ ಕೆಲಸ ಮಾಡಬೇಕಾದರೆ ವಿದ್ಯುತ್ ಅಥವಾ ಮತ್ತಾವುದಾದರೂ ಶಕ್ತಿ ಆಸರೆ ಅದಕ್ಕೆ ಬೇಕು. ಸುಮ್ಮನೆ ಯಂತ್ರ ಕೆಲಸ ಮಾಡುವುದು ಎಂದರೆ ಸಾಲದು. ಆ ಶಕ್ತಿಯನ್ನೆ ನಾವು ಜೀವ, ಚೈತನ್ಯ ಎನ್ನುವುದು. ಎಲ್ಲಿಯವರೆಗೆ ಆ ಜೀವ ಆ ಚೈತನ್ಯ ದೇಹದಲ್ಲಿರುವುದೊ ಅಲ್ಲಿಯವರೆಗೆ ಅದು ಕೆಲಸಮಾಡುತ್ತಿರು ವುದು. ಯಾವಾಗ ಆ ಚೇತನ ಬಿಟ್ಟು ಹೋಗುವುದೊ ಆಗ ದೇಹ ನಿರ್ಜೀವವಾಗುವುದು ಎನ್ನುವನು ಹಿಂದು.

ವಿಜ್ಞಾನಿ ಪ್ರಯೋಗಶಾಲೆಯಲ್ಲಿ ಮಾಡುವ ಪ್ರಯೋಗಗಳು

ಸತ್ಯ, ಅವನು ಕಂಡುಹಿಡಿಯುವ ಯಂತ್ರಗಳು ಸತ್ಯ ಎಂದು ಒಪ್ಪಿಕೊಂಡರೆ, ಯಾರು ಇದನ್ನೆಲ್ಲಾ ಕಂಡುಹಿಡಿಯುತ್ತಾರೊ ಅವರ ಮನಸ್ಸು ಇವೆಲ್ಲಕ್ಕಿಂತ ಸತ್ಯವಾಗಿರಬೇಡವೆ?

ಎರಡನೆಯ ಗುಂಪಿಗೆ ಸೇರಿದ ಜೀವವಿಜ್ಞಾನವಾದಿ (Biologist) ಹೀಗೆನ್ನುವನು: ಆದಿಮಾನವ ತನ್ನ ದೇಹದಲ್ಲಿರುವ ವೀರ್ಯದಿಂದ ಮತ್ತೊಬ್ಬನನ್ನು ಸೃಷ್ಟಿಸುವನು, ಅವನು ಇನ್ನೊಬ್ಬನನ್ನು ಸೃಷ್ಟಿಸುವನು, ಹೀಗೆಯೆ ಆಗುತ್ತಾ ಇಂದಿನ ವರೆಗೆ ಬಂದಿದೆ. ಮುಂದೆಯೂ ಹೀಗೆ ಆಗುತ್ತಿರುವುದು. ಒಂದು ಉರಿಯುವ ಪಂಜು ಮತ್ತೊಂದನ್ನು ಹತ್ತಿಸಿ ತಾನು ಆರಿ ಹೋಗುವಂತೆ. ಹೊಸದಾಗಿ ಉರಿಯುವ ಮತ್ತೊಂದು ಪಂಜು ಹಿಂದೆ ಏತಕ್ಕೆ ಉರಿಯುತ್ತಿರಬೇಕು? ತಂದೆಯಿಂದ ಮಗ ಹುಟ್ಟುವನು, ಅವನಿಂದ ಮೊಮ್ಮಗ; ನಾವು ಹೀಗೆ ತಿಳಿದುಕೊಳ್ಳಬಹುದಲ್ಲ ಎನ್ನುವನು. ಇದನ್ನು ನೋಡಿದಾಗ ಇದು ನಿಜವಾದರೆ ಪೂರ್ವಜನ್ಮದ ಸಿದ್ಧಾಂತವೆ ಆವಶ್ಯಕವಿಲ್ಲ ಎಂಬಂತೆ ತೋರುವುದು. ಆದರೆ ಇದು ನಿಜವೆ ಎಂಬುದನ್ನು ವಿಮರ್ಶಿಸಬೇಕು. ತಂದೆಯಂತೆ ಮಗನಾದರೆ ಪರವಾಗಿಲ್ಲ. ಆದರೆ ತಂದೆಯಂತೆ ಯಾವಾಗಲೂ ಮಗ ಇರುವನೆ, ಎಷ್ಟು ಜನ ಮಕ್ಕಳು ಶೀಲದಲ್ಲಿ, ಪಾಂಡಿತ್ಯದಲ್ಲಿ, ತಂದೆಯಂತೆ ಆಗುವರು? ದೇಹ ರಚನೆಯಲ್ಲಿ ತಂದೆ ಅಥವಾ ತಾಯಿಯನ್ನು ಹೋಲಬಹುದು. ಆ ವಂಶದಲ್ಲಿದ್ದ ರೋಗರುಜಿನ, ಪಡೆಯುವದರಲ್ಲಿ ನಮ್ಮ ಹಿಂದಿನವರನ್ನು ಹೋಲಬಹುದು. ಆದರೆ ನಮ್ಮ ಶೀಲ ನಮ್ಮ ರುಚಿ, ನಮ್ಮ ಸಂಸ್ಕೃತಿಗೆ ತಂದೆ ತಾಯಿಗಳಾರೂ ಕಾರಣವಲ್ಲ ಎಂಬುದು ಸ್ವಲ್ಪ ಪರೀಕ್ಷೆ ಮಾಡಿದರೆ ಗೊತ್ತಾಗುವುದು. ಹಾಗಿದ್ದರೆ ಈ ವೈವಿಧ್ಯತೆಗೆ ಕಾರಣವೇನು ಎಂಬ ಪ್ರಶ್ನೆ

ಬಿಡುವುದು. ವಿಜ್ಞಾನಿ ಯಾವಾಗ ತನ್ನ ಬತ್ತಳಿಕೆಯಲ್ಲಿರುವ ಬಾಣವನ್ನು ಪ್ರಯೋಗಿಸಿ ನಿರಾಶನಾಗುವನೊ ಆಗ ಇದೊಂದು (Chance) ಅಕಸ್ಮಾತ್ ಎಂಬ ಬ್ರಹ್ಮಾಸ್ತ್ರವನ್ನು ಬಿಡುವನು. ಆದರೆ ಸರಿಯಾದ ವೈಜ್ಞಾನಿಕ ದೃಷ್ಟಿಯಿಂದ ಅಕಸ್ಮಾತ್ ಎಂಬ ಪದ ಇಲ್ಲ. ಜೀವನದಲ್ಲಿ ಎಲ್ಲವೂ ಯಾವುದೊ ಒಂದು ನಿಯಮಕ್ಕೆ ಬದ್ಧವಾಗಿ ನಡೆಯುತ್ತಿದೆ. ವಿಜ್ಞಾನಶಾಸ್ತ್ರ ನಂಬು ವುದೆ ಇದನ್ನು. ಇದೇ ಅದರ ತಳಹದಿ. ನಿಜವಾದ ವಿಜ್ಞಾನಿ ಯಾದರೆ ಅದು ಹೇಗೆ ಹೀಗೆ ಆಗುತ್ತಿದೆಯೊ ಅದರ ಹಿಂದೆ ಇರುವ ನಿಯಮ ನನಗೆ ಗೊತ್ತಿಲ್ಲವೆಂದು ಹೇಳಬೇಕೆ ಹೊರತು ನಿಯಮವೆ ಇಲ್ಲ ಎಂದು ಹೇಳುವುದಕ್ಕೆ ಆಗುವುದಿಲ್ಲ. ಸೂರ್ಯ, ಚಂದ್ರರ ಪ್ರದಕ್ಷಿಣೆಯಲ್ಲಿ ನಿಯಮವನ್ನು ನೋಡು ತ್ತಾನೆ. ಕಣಗಳ ಅಂತರಾಳದಲ್ಲಿ ನಿಯಮವನ್ನು ನೋಡು ತ್ತಾನೆ. ಜೀವಾಣುಗಳ ಬೆಳವಣಿಗೆಯಲ್ಲಿ ನಿಯಮವನ್ನು ನೋಡುತ್ತಾನೆ. ಹೀಗಿದ್ದರೆ ಚೇತನ ಪ್ರಪಂಚದಲ್ಲಿ ನಿಯಮ ಗೈರ್‌ಹಾಜರೇ! ಆಗಲೇ ಹಿಂದು ಹೇಳುತ್ತಾನೆ: ಪುನರ್ಜನ್ಮ ಸಿದ್ಧಾಂತ ನಾವು ಕೊಡುವ ಒಂದು ವಿವರಣೆ. ನೀವು ಅದಕ್ಕಿಂ ತಲೂ ಸಮರ್ಪಕವಾಗಿರುವುದನ್ನು ಕೊಟ್ಟರೆ ನಾವು ಅದನ್ನು ಸ್ವೀಕರಿಸಲು ಸಿದ್ಧ. ಯಾವ ವಿವರಣೆಯೂ ಇಲ್ಲದೆ ಇರುವಾಗ ಅಥವಾ ಕೊಡುವ ವಿವರಣೆ ಸಮರ್ಪಕವಿಲ್ಲದಾಗ ನೀವು ಕೊಡುವ ವಿವರಣೆಗಳೆಲ್ಲಕ್ಕಿಂತಲೂ ಸಮರ್ಪಕವಾಗಿದೆ ನಮ್ಮ ವಿವರಣೆ ಎನ್ನುವನು ಹಿಂದೂ.

ಪುನರ್ಜನ್ಮ ಸಿದ್ಧಾಂತಕ್ಕೆ ವಿರೋಧವಾಗಿ ತರುವ ಮತ್ತೊಂದು ವಾದವೇ, ನಿಮಗೆ ಹಿಂದಿನ ಜನ್ಮವಿದ್ದರೆ ಅದನ್ನು ಏತಕ್ಕೆ ಜ್ಞಾಪಿಸಿಕೊಂಡು ಹೇಳಬಾರದು. ಆಗ ನಾವು

ಅದನ್ನು ಸರಿಯೆ ತಪ್ಪೆ ಎಂದು ಪರೀಕ್ಷೆಮಾಡಬಹುದಲ್ಲ ಎನ್ನು ವನು. ಯಾರು ಈ ವಾದವನ್ನು ತರುವರೋ ಅವರು ಒಂದು ಘಟನೆ ನಿಜವಾಗಿರಬೇಕಾದರೆ ನಾನು ಅದನ್ನು ಜ್ಞಾಪಿಸಿ ಕೊಳ್ಳಬೇಕು, ಯಾವಾಗ ಅದು ನನ್ನ ಜ್ಞಾಪಕಕ್ಕೆ ಬರುವು ದಿಲ್ಲವೊ ಅದಿಲ್ಲವೇ ಇಲ್ಲ ಎಂದು ಹೇಳಿದಂತೆ ಆಗುವುದು. ನಾವು ಎಳೆಯ ಮಕ್ಕಳಾಗಿದ್ದಾಗ ತಾಯಿಯ ತೊಡೆಯ ಮೇಲೆ ಏನೇನು ಮಾಡಿದೆವು ಎಂಬುದು ನಮಗೆ ಗೊತ್ತೆ? ಗೊತ್ತಿಲ್ಲದೇ ಇದ್ದರೆ ನಾವು ಎಳೆಯ ಮಗುವಾಗಿಯೇ ಇರಲಿಲ್ಲವೆ? ಕೆಲವು ವೇಳೆ ಹಲವು ವೃದ್ಧರಿಗೆ ಜ್ಞಾಪಕಶಕ್ತಿಯೇ ಇರುವುದಿಲ್ಲ. ಹಿಂದೆ ಏನುಮಾಡಿದರು ಎಂಬುದು ಜ್ಞಾಪಕಕ್ಕೆ ಬರದೇ ಇದ್ದರೆ ಅದನ್ನೆಲ್ಲಾ ಅವರು ಮಾಡಲಿಲ್ಲವೆ?

ನಾವು ನಮ್ಮ ಹಿಂದಿನದನ್ನು ತಾತ್ಕಾಲಿಕವಾಗಿ ಮರೆತಿರು ವೆವು. ಈ ಮರವು ಬದ್ಧ ಜೀವಿಗಳಿಗೊಂದು ವರ ಶಾಪವಲ್ಲ. ದೇವರೆ ಇದನ್ನು ನಮ್ಮ ಮೇಲಿನ ಕರುಣೆಯಿಂದ ದಯಪಾಲಿ ಸಿರುವನು. ನಾವು ಈ ಒಂದು ಜೀವನದಲ್ಲಿ ಮಾಡಿರುವ ಒಳ್ಳೆಯದು ಕೆಟ್ಟದ್ದು ಸುಖ ದುಃಖವನ್ನೆಲ್ಲ ಜ್ಞಾಪಕ ಇಟ್ಟು ಕೊಂಡಿದ್ದರೇ ಹುಚ್ಚರಾಗಿ ಹೋಗುವೆವು. ಹೀಗಿರುವಾಗ ಹಿಂದಿನ ಜನ್ಮಗಳ ನೆನಪಿನ ಭಾರವನ್ನೆಲ್ಲ ಹೊತ್ತರೆ ಜೀವಿ ಮುಂದಡಿ ಇಡಲಾರದೆ ತತ್ತರಿಸಿ ಬೀಳುವನು. ಹಿಂದಿನ ಜನ್ಮವನ್ನು ನಾವು ಜ್ಞಾಪಕಕ್ಕೆ ತರಲು ಆಗುವುದಿಲ್ಲವೆಂದಲ್ಲ. ಅದು ಸಾಧ್ಯ. ಪತಂಜಲಿ ಯೋಗಸೂತ್ರದಲ್ಲಿ ಒಬ್ಬ ತನ್ನ ಮನಸ್ಸಿನಲ್ಲಿರುವ ಸಂಸ್ಕಾರಗಳ ಮೇಲೆ ಯಾವಾಗ ಏಕಾಗ್ರ ಮಾಡುವನೊ ಆಗ ಅವನ ಹಿಂದಿನ ಜನ್ಮಗಳ ಸ್ಮೃತಿ ಜಾಗ್ರತ ವಾಗುವುದು ಎನ್ನುವನು. ಹಿಂದಿನ ಜನ್ಮದ ನೆನಪೆಲ್ಲ ನಮ್ಮ

ಮನಸ್ಸಿನ ಉಗ್ರಾಣದಲ್ಲಿ ಸಂಸ್ಕಾರ ರೂಪದಲ್ಲಿ ಅವ್ಯಕ್ತಸ್ಥಿತಿಯಲ್ಲಿವೆ. ಅವನ್ನು ಬೇಕಾದರೆ ಎಬ್ಬಿಸಬಹುದು. ಆದರೆ ಅವನ್ನು ಧೀರರಾಗಿ ಕಂಪಿಸದೆ ನಿಂತುನೋಡುವ ಧೈರ್ಯವನ್ನು ನಾವು ಮೊದಲು ಪಡೆಯಬೇಕು. ಎಂದು ನಾವು ಮುಕ್ತರಾಗುವೆವೊ ಆಗ ಆ ಜೀವಿಯ ಹಿಂದಿನ ಜನ್ಮದ ನೆನಪೆಲ್ಲ ಓದಿದ ಪುಸ್ತಕದ ಹಾಳೆಗಳಂತೆ ಅವನಿಗೆ ವ್ಯಕ್ತವಾಗುವುದು.

ಹಿಂದೂಗಳು ಹೇಗೆ ಪುನರ್ಜನ್ಮವನ್ನು ನಂಬುವರೊ ಹಾಗೆಯೇ ಜೀವಿ ಹಲವು ದೇಹಗಳನ್ನು ಧರಿಸುವುದನ್ನೂ, ಹಲವು ಲೋಕಕ್ಕೆ ಹೋಗುವುದನ್ನೂ ನಂಬುವರು. ಮಾನವದೇಹ ಎಲ್ಲ ದೇಹಗಳಿಗಿಂತಲೂ ಶ್ರೇಷ್ಠ. ದೇವತೆಗಳ ಲೋಕವಾಗಲಿ ಪ್ರಾಣಿಗಳ ಲೋಕವಾಗಲಿ ಎರಡೂ ಕರ್ಮಭೂಮಿ. ಅಲ್ಲಿ ಸ್ವಾತಂತ್ರ್ಯವಿಲ್ಲ. ಹಿಂದಿನ ಸುಕೃತ ಅಥವಾ ದುಷ್ಕೃತ್ಯಗಳನ್ನು ಅನುಭವಿಸುವುದಕ್ಕೆ ಮಾತ್ರ ಹೋಗುವನು. ಮಾನವನಾಗಿರುವಾಗ ಫಲಾಪೇಕ್ಷೆಯ ದೃಷ್ಟಿಯಿಂದ ಯಾವುದಾದರೂ ಕರ್ಮಗಳನ್ನು ಮಾಡಿದರೆ ಅವನು ಮರಣಾನಂತರ ದೇವಲೋಕಗಳಿಗೆ ಹೋಗುವನು. ಅಲ್ಲಿ ತನ್ನ ಪುಣ್ಯದ ಬುತ್ತಿ ಕರಗುವವರೆಗೆ ಇದ್ದು ಪುನಃ ಮಳೆಯ ರೂಪದಲ್ಲಿ ಧರೆಗೆ ಬಿದ್ದು ಸಸ್ಯವನ್ನು ಸೇರಿ ಅನಂತರ ಊಟಮಾಡುವ ಆಹಾರದ ಮೂಲಕ ಮನುಷ್ಯ ದೇಹವನ್ನು ಸೇರಿ ಅವರ ಸಂತತಿಯಲ್ಲಿ ಹುಟ್ಟುವರು. ಹಾಗೆಯೇ ಮನುಷ್ಯರಾಗಿರುವಾಗ ಪಾಪಕರ್ಮಗಳನ್ನು ಮಾಡಿದರೆ ಪ್ರಾಣಿ ಜನ್ಮ ಪ್ರಾಪ್ತವಾಗುವುದು. ಅಲ್ಲಿ ಕೆಲವುಕಾಲ ಅನುಭವಿಸಿದಮೇಲೆ ಮರಣಾನಂತರ ಮನುಷ್ಯನಾಗಿ ಹುಟ್ಟುವನು. ಇದರಂತೆಯೇ ಅವನು ಸಸ್ಯರೂಪವನ್ನು ಕೂಡ ಧರಿಸಿ ಬರಬಹುದು.

ಮಾನವ ಜನ್ಮದಲ್ಲಿ ಮಾತ್ರ ಸಾಧನೆ ಮಾಡಿ ಮುಕ್ತಿಗಳಿಸಲು ಸಾಧ್ಯ. ದೇವತೆಯ ಶರೀರಕ್ಕಿಂತಲೂ ಮಾನವಜನ್ಮ ಪವಿತ್ರ. ಏಕೆಂದರೆ ಇಲ್ಲಿ ಮಾತ್ರ ಮುಕ್ತಿಗಳಿಸಬಹುದು. ದೇವರು ಎಲ್ಲಾ ವಸ್ತುಗಳನ್ನೂ ಸೃಷ್ಟಿಸಿ ಆದಮೇಲೆ ಮಾನವ ನನ್ನು ಸೃಷ್ಟಿಸಿ ಆತನಿಗೆ ನಮಿಸುವನು ಎಂದು ಒಂದು ದೇಶದ ಪುರಾಣದಲ್ಲಿ ಬರುವುದು. ಏಕೆಂದರೆ ಮಾನವ ಭಗವಂತನ ಶ್ರೇಷ್ಠತಮಕೃತಿ. ಆದಕಾರಣವೇ ಜೀವಿಗೆ ಮನುಷ್ಯದೇಹ ದೊರಕುವುದೊಂದು ಮಹಾಭಾಗ್ಯ. ಅದನ್ನು ಸದ್ವಿನಿಯೋಗ ಮಾಡಿಕೊಳ್ಳಬೇಕು. ಪುನಃ ಮನುಷ್ಯದೇಹ ಪ್ರಾಪ್ತವಾಗಲು ಉತ್ತಮಕರ್ಮವನ್ನು ಮಾಡಿ ಎನ್ನುವುದು ನಮ್ಮ ಶಾಸ್ತ್ರ. ಜೀವಿ ಜ್ಞಾನದ ಆವಿಗೆಯಲ್ಲಿ ಬೇಯುವವರೆಗೆ ಹಲವು ವೇಳೆ ಹಲವು ವೇಷ ಧರಿಸಿ ಪ್ರಪಂಚಕ್ಕೆ ಬಂದು ಹೋಗ ಬೇಕಾಗುವುದು.

## ಜಗತ್

ಸೃಷ್ಟಿ ಹೇಗೆ ಆಯಿತು, ಏತಕ್ಕೆ ಆಯಿತು ಎಂಬ ಪ್ರಶ್ನೆ ಯನ್ನು ಮಾನವ ವಿವರಿಸಲಾರ. ಏಕೆಂದರೆ ಇವನೇ ಸೃಷ್ಟಿ ಯಾದ ಮೇಲೆ ಬಂದಿರುವವನು. ಯಾರಾದರೂ ಸೃಷ್ಟಿಗಿಂತ ಮುಂಚೆ ಇದ್ದಿದ್ದರೆ ಇದನ್ನು ಹೀಗೆ ಆಯಿತು ಎಂಬುವನ್ನು ವಿವರಿಸಬಲ್ಲರು. ಆದರೂ ಮಾನವ ಸುಮ್ಮನಿರಲಾರ. ಕಾಲ ಗರ್ಭದ ಹಿಂದೆ ಇರುವುದೇನು, ಇದು ಹೇಗೆ ಆಯಿತು ಎಂಬ ಪ್ರಶ್ನೆಯನ್ನು ಹಾಕಿಕೊಂಡು ಅದನ್ನು ಹೇಗೋ ಬಿಡಿಸಲು ಯತ್ನಿಸುವನು. ಹೇಗೆ? ಏಕೆ? ಎಂಬ ಪ್ರಶ್ನೆಯ ಅಂಕುಶ ಮಾನವನನ್ನು ಯಾವಾಗಲೂ ತಿವಿಯುತ್ತಿರುವುದು. ಆದ

ಕ್ಕಾಗಿಯೇ ಹಿಂದೂಗಳೂ ಕೂಡ ಒಂದು ವಿವರಣೆ ಕೊಡುವರು. ಈ ವಿವರಣೆ ವಿಚಾರಕ್ಕೆ ವಿರೋಧವಾಗಿಲ್ಲ.

ಸೃಷ್ಟಿ ಎಂದರೆ ಯಾವುದೋ ಹಿಂದೆ ಎಂದೂ ಇಲ್ಲದ ಒಂದು ಹೊಸ ವಸ್ತುವಿನ ನಿರ್ಮಾಣವಲ್ಲ ಹಿಂದೂಗಳ ದೃಷ್ಟಿಯಲ್ಲಿ. ಸೃಷ್ಟಿ ಸ್ಥಿತಿ ಪ್ರಳಯ ಎಂಬುದು ಒಂದು ಅಲೆಯಂತೆ. ಅಲೆ ಏಳಲು ಪ್ರಾರಂಭವಾಗುವುದು, ಏಳುವುದು, ಕೊನೆಗೆ ಬಿದ್ದು ಹೋಗುವುದು. ಅದು ಏಳುವಾಗ ಶೂನ್ಯದಿಂದ ಏಳಲಿಲ್ಲ. ಮತ್ತೊಂದು ಸೂಕ್ಷ್ಮಸ್ಥಿತಿಯಿಂದ ಎದ್ದಿತು, ಬಿದ್ದಮೇಲೆ ಸರ್ವನಾಶವಾಗಿ ಹೋಗಲಿಲ್ಲ. ಮತ್ತೊಂದು ಸೂಕ್ಷ್ಮ ಸ್ಥಿತಿಗೆ ಹೋಯಿತು. ವಸ್ತುಗಳೆಲ್ಲಾ ಸೂಕ್ಷ್ಮಸ್ಥಿತಿಯಿಂದ ಬಂದು ಸ್ಥೂಲಸ್ಥಿತಿಯಲ್ಲಿ ಕೆಲವು ಕಾಲವಿದ್ದು ಪುನಃ ಸೂಕ್ಷ್ಮ ಸ್ಥಿತಿಗೆ ಹೋಗುವುದನ್ನು ನಮ್ಮ ಕಣ್ಣ ಮುಂದೆ ಪ್ರತಿನಿತ್ಯವೂ ನೋಡುತ್ತಿರುವೆವು. ಇದೇ ನಿತ್ಯಪ್ರಳಯ, ನಿತ್ಯಸೃಷ್ಟಿ. ಇದೇ ನಿಯಮ ಇಡೀ ಬ್ರಹ್ಮಾಂಡದ ಹಿಂದೆ ಇದೆ. ಪ್ರಪಂಚ ಸ್ತೋಮ ಅವ್ಯಕ್ತ ಸ್ಥಿತಿಯಲ್ಲಿದೆ. ಇದನ್ನೇ ಪ್ರಕೃತಿ ಎನ್ನುವರು. ಈ ಪ್ರಕೃತಿ ಭಗವಂತನ ಶಕ್ತಿ. ಇದೇ ಜಗತ್ತಿನ ಮೂಲ. ದೇವರು ಈ ಪ್ರಕೃತಿಯ ಮೂಲಕ ಸೃಷ್ಟಿಸುವನು. ಹಾಗೆ ಮಾಡುವಾಗ ಮೊದಲು ಅವನಿಂದ ಅವ್ಯಕ್ತ ಬರುವುದು, ಆ ಅವ್ಯಕ್ತದಿಂದ ಪಂಚತನ್ಮಾತ್ರಗಳು, ಪಂಚತನ್ಮಾತ್ರದಿಂದ (ಸೂಕ್ಷ್ಮ ಪಂಚಭೂತಗಳು) ಪಂಚಭೂತಗಳು, ಪಂಚಭೂತಗಳಿಂದ ಚರಾಚರ ಪ್ರಪಂಚವೆಲ್ಲಾ ಸೃಷ್ಟಿಯಾಗುತ್ತವೆ. ಈ ಮೂಲವಸ್ತು ದೇವರಿಗೆ ಅಧೀನ. ಅವನು ಅದನ್ನು ವ್ಯಾಪಿಸಿಕೊಂಡಿರುವನು. ಇಡೀ ಬ್ರಹ್ಮಾಂಡವನ್ನು ತನ್ನ ಅಂಶದಿಂದ ಸೃಷ್ಟಿಸುವನು. ಸೃಷ್ಟಿಯಾದ ಮೇಲೆ ದೇವರು ಕಡಿಮೆಯಾಗ

ಲಿಲ್ಲ. ಅನಂತದಿಂದ ಅನಂತ ಕಳೆದರೆ ಅನಂತವೇ ಉಳಿಯು ವುದು.

ಈ ಸೃಷ್ಟಿಗೆ ಉಪಾದಾನ ಕಾರಣವೂ ಅವನೇ, ನಿಮಿತ್ತ ಕಾರಣವೂ ಅವನೇ. ದೇವರೇ ತಾನು ಬಹುವಾಗುತ್ತೇನೆಂದು ತಪಸ್ಸುಮಾಡಿ ಬಹುವಾಗಿ ಅದರೊಳಗೇ ಪ್ರವೇಶಮಾಡಿದ ನೆಂದು ಉಪನಿಷತ್ತು ಸಾರುವುದು. ಈ ಸೃಷ್ಟಿಯನ್ನು ನಾವು ನಿಕೃಷ್ಟ ದೃಷ್ಟಿಯಿಂದ ನೋಡುವಂತಿಲ್ಲ. ಏಕೆಂದರೆ ಇದೆಲ್ಲಾ ಅವನಿಂದ ಬಂದಿದೆ. ಬಂದಾದ ಮೇಲೂ ಅವನಿಂದ ಹೊರಗೆ ಇಲ್ಲ. ಇದೆಲ್ಲಾ ಅವನಲ್ಲಿಯೇ ಇದೆ. ಎಲ್ಲದರ ಅಂತರಾಳ ದಲ್ಲಿಯೂ ಅವನೇ ಕುಳಿತಿರುವನು. ಕೊನೆಗೆ ನಾಶವಾದರೂ ದೇವರಲ್ಲಿಯೇ ಐಕ್ಯವಾಗುವುದು. ಇದೊಂದು ಅಲೆಯಂತೆ. ಅಲೆ ಏಳುವುದಕ್ಕೆ ಮುಂಚೆ ಸಾಗರದಲ್ಲಿತ್ತು. ಅಲೆ ಎದ್ದಾದ ಮೇಲೂ ಸಾಗರದಲ್ಲಿಯೇ ಇದೆ. ಬಿದ್ದಮೇಲೂ ಸಾಗರಕ್ಕೇ ಹೋಯಿತು. ಜಗತ್ತಿಗೂ ಭಗವಂತನಿಗೂ ಒಂದು ನಿಕಟ ಸಂಬಂಧವನ್ನು ನೋಡುವೆವು. ನಮ್ಮ ಒಳಗಣ್ಣು ತೆರೆದರೆ ಭಗವಂತನ ಲೀಲೆಯನ್ನು ಕಣ್ಣುಮುಂದಿರುವ ಪ್ರಪಂಚದ ಚರಾಚರ ವಸ್ತುಗಳಲ್ಲೆಲ್ಲಾ ನೋಡಬಹುದು. ಗಾಳಿ ಬೀಸು ವುದರ ಹಿಂದೆ, ಸೂರ್ಯಚಂದ್ರರ ನಿತ್ಯಪ್ರದಕ್ಷಿಣೆಯಲ್ಲಿ, ಹಗಲು ರಾತ್ರಿಯಲ್ಲಿ, ಗಿಡದಲ್ಲಿ ಬಳ್ಳಿಯಲ್ಲಿ ಚಿಟ್ಟೆಯಲ್ಲಿ ಹಾರುವ ಹಕ್ಕಿ ಯಲ್ಲಿ ಚಲಿಸುವ ಮೃಗದಲ್ಲಿ ಜೀವಿಗಳ ಅಳುನಗುಗಳ ಅಂತ ರಾಳದಲ್ಲೆಲ್ಲಾ ಈ ಬ್ರಹ್ಮಾಂಡ ನಾಟಕದ ಸೂತ್ರಧಾರನನ್ನು ನಾವು ಅರಿಯಬಹುದು.

## ಈಶ್ವರ

ಮೊದಲನೆಯದೆ, ಜೀವ ಜಗತ್ತಿಗಿಂತ ಶ್ರೇಷ್ಠವಾಗಿರುವ

ಈಶ್ವರ, ಈ ಪ್ರಪಂಚ ನಾಟಕದ ಸೂತ್ರಧಾರ. ಈ ಪ್ರಪಂಚ ಒಂದು ರಂಗಭೂಮಿ. ಜೀವಿಗಳು ಪಾತ್ರಧಾರಿಗಳು . ಈ ಆಟ ವನ್ನು ಆಡಿಸುವನು ಈಶ್ವರ. ಲೀಲಾನಾಟಕ ಸೂತ್ರಧಾರನ ವನು. ನಾವು ಅವನನ್ನು ಕಂಡುಹಿಡಿಯಬೇಕು, ಅವನೊಂದಿಗೆ ಒಂದು ಸಂಬಂಧವನ್ನು ಬೆಳೆಸಿಕೊಳ್ಳಬೇಕು. ಈ ಮಾಯೆಯ ಬಲೆಗೆ ನಮ್ಮನ್ನು ಸಿಲುಕದಂತೆ ಮಾಡೆಂದು ಬೇಡಬೇಕು. ಅವನು ಕರುಣಿಸಿದರೆ ಆಗ ಮಾತ್ರ ನಮಗೆ ಮುಕ್ತಿ. ಆ ಭಗ ವಂತನನ್ನು ಕಾಲದೇಶದ ದೃಷ್ಟಿಯಿಂದ ನೋಡಿದಾಗ ಅವನಿಗೆ ಹಲವು ಆಕಾರಗಳು ಮತ್ತು ನಾಮಗಳಿವೆ. ಯಾವ ಹೆಸರಿನಿಂದ ಬೇಕಾದರೂ ಅವನನ್ನು ಕರೆಯಬಹುದು, ಯಾವ ಆಕಾರದ ಮೂಲಕ ಬೇಕಾದರೂ ಅವನನ್ನು ಧ್ಯಾನಿಸಬಹುದು. ಕಾಲದೇಶ ಕಾರ್ಯಕಾರಣಕ್ಕೆ ಅತೀತವಾದರೆ ಆ ಈಶ್ವರನೇ ಪರಬ್ರಹ್ಮ, ನಿರಾಕಾರ, ನಿರ್ಗುಣ. ನಾವು ಎಲ್ಲಿಯವರೆಗೆ ಒಂದು ವ್ಯಕ್ತಿಯೆಂದು ಭಾವಿಸುವೆವೋ ಅಲ್ಲಿಯವರೆಗೆ ದೇವರಿಗೆ ಒಂದು ವ್ಯಕ್ತಿತ್ವ ಇದೆ. ನಾವು ವ್ಯಕ್ತಿಗೆ ಅತೀತರಾಗಿಹೋದರೆ ದೇವರಿಗೆ ಯಾವ ಗುಣವೂ ಇಲ್ಲ, ಆಕಾರವೂ ಇಲ್ಲ, ನಾಮವೂ ಇಲ್ಲ. ಅಂತಹ ದೇವರು ಅನಂತ ನಾಗಿರುವುದರಿಂದ ಇಬ್ಬರು ಅನಂತ ವ್ಯಕ್ತಿಗಳು ಇರಲು ಸಾಧ್ಯ ವಿಲ್ಲ. ಅವನೊಬ್ಬನೇ ಇರಬೇಕು: "ಅವನೇ ಈ ಜಗತ್ತಿಗೆ ತಂದೆ, ತಾಯಿ, ಧಾತೃ, ಪಿತಾಮಹ, ತಿಳಿಯಲು ಯೋಗ್ಯ ವಾದ ವಸ್ತು. ಗತಿ, ಭರ್ತೃ, ಪ್ರಭು, ಸಾಕ್ಷಿ, ನಿವಾಸ, ಶರಣು, ಸುಹೃತ್ ಪ್ರಭವ ಪ್ರಳಯ ಸ್ಥಾನ, ನಿಧಾನ, ಅವ್ಯಯವಾದ ಬೀಜ" ಎಂದು ಗೀತೆ ಸಾರುವುದು. ದೇವರು ಜೇಡರ ಹುಳುವಿ ನಂತೆ ಬಲೆಯನ್ನು ಬೀಸಿರುವನು, ಆ ಬಲೆಯೇ ಈ ಜಗತ್ತು.

ಜೀವಿಗಳು ಬಲೆಯ ಭ್ರಮೆಗೆ ಬಿದ್ದು ಈಗ ಒದ್ದಾಡುತ್ತಿರುವರು. ಆ ಬಲೆಯ ಮೂಲೆಯಲ್ಲಿರುವ ದೇವರೆಡೆಗೆ ಯಾವಾಗ ಹೋಗುವರೋ ಆಗಲೇ ಸಂತೋಷ, ತೃಪ್ತಿ.

ಭಗವಂತನಿಗೆ ಹಲವು ಹೆಸರುಗಳಿವೆ. ಆದರೆ ಎಲ್ಲರಿಗೂ ಮೆಚ್ಚುವಂತಹುದು ಅವನನ್ನು ಸಚ್ಚಿದಾನಂದ ಸ್ವರೂಪನೆನ್ನುವುದು. ಈ ಜೀವಿಗಳೆಲ್ಲಾ ಅವನನ್ನು ಸೇರುವುದಕ್ಕೆ ಪಯಣ ಹೊರಟಿರುವರು. ಎಂದು ಅವನನ್ನು ಸೇರುವರೋ ಆಗ ಸಂಸಾರದಿಂದ ಪಾರಾಗುವರು.

## ೪

## ಅನುಷ್ಠಾನ ಮಾರ್ಗ

ಜೀವಿಯ ಗುರಿಯೇ ಮುಕ್ತಿ. ಇದನ್ನು ಎಲ್ಲಾ ಹಿಂದೂಗಳೂ ಒಪ್ಪುವರು. ಪ್ರತಿಯೊಂದು ಜೀವಿಯೂ ತಿಳಿದೋ ತಿಳಿಯದೆಯೋ ಹೃತ್ಪೂರ್ವಕವಾಗಿಯೋ ಬಲಾತ್ಕಾರವಾಗಿಯೋ ದೇವರೆಡೆಗೆ ಪ್ರಯಾಣ ಮಾಡುತ್ತಿರುವರು. ಯಾರು ತಿಳಿದು ಭಕ್ತಿ ಶ್ರದ್ಧೆಯಿಂದ ಸಾಧನೆಮಾಡುವರೋ ಅವರು ಬೇಗ ಗುರಿ ಸೇರುವರು. ನದಿಯ ನೀರು ಒಂದಲ್ಲ ಒಂದು ದಿನ ಸಾಗರ ಸೇರುವುದು. ಯಾರು ಅದರ ಮೇಲೆ ತೇಲುತ್ತಿರುವರೋ ಅವರು ಎಂದಾದರೊಂದುದಿನ ಸಾಗರವನ್ನು ಸೇರುವುದರಲ್ಲಿ ಸಂಶಯವಿಲ್ಲ. ಆದರೆ ಯಾರು ತಮ್ಮ ಸ್ವಪ್ರಯತ್ನವನ್ನೂ ಜೊತೆಗೆ ಸೇರಿಸುವರೋ ಅವರು ಶೀಘ್ರದಲ್ಲಿ ಗುರಿ ಸೇರುವರು.

ಹಿಂದೂಗಳು ಹೀಗೆ ಗುರಿ ಸೇರುವುದಕ್ಕೆ ನಾಲ್ಕು ಮುಖ್ಯ ಮಾರ್ಗಗಳನ್ನು ಕಂಡುಹಿಡಿದಿರುವರು. ಪ್ರತಿಯೊಬ್ಬರೂ ತಮ್ಮ

ಪ್ರಕೃತಿಗೆ ತಕ್ಕಂತೆ ಯಾವುದಾದರೂ ಒಂದನ್ನು ಅಥವಾ ಹೆಚ್ಚು ಮಾರ್ಗಗಳನ್ನು ಸೇರಿಸಿಯೋ ಸಾಧನೆಮಾಡಿ ಮುಕ್ತಿ ಗಳಿಸಬಹುದು. ಆ ಮಾರ್ಗಗಳೇ ರಾಜಯೋಗ, ಜ್ಞಾನ ಯೋಗ, ಕರ್ಮಯೋಗ, ಭಕ್ತಿಯೋಗ. ಮಾನವರಲ್ಲಿ ಎಲ್ಲರೂ ಇವುಗಳಲ್ಲಿ ಯಾವುದಾದರೂ ಒಂದು ವರ್ಗಕ್ಕೆ ಬರು ವರು. ಯಾವ ಒಂದು ವರ್ಗಕ್ಕೆ ಬರದವರು ಯಾರೂ ಇಲ್ಲವೆಂತಲೇ ಹೇಳಬಹುದು. ಎಲ್ಲರಲ್ಲಿಯೂ ಈ ನಾಲ್ಕು ಯೋಗಗಳ ಅಂಶಗಳಿವೆ. ಆದರೆ ಒಬ್ಬೊಬ್ಬರಲ್ಲಿ ಒಂದೊಂದು ಮೇಲೆದ್ದು ಕಾಣುವುದು. ಉಳಿದ ಅಂಶಗಳು ಹಿನ್ನೆಲೆಯಾ ಗಿರುತ್ತವೆ.

## ರಾಜಯೋಗ

ಯೋಗ ಎಂದರೆ ಒಂದುಗೂಡಿಸುವುದು. ಜೀವಾತ್ಮನನ್ನು ಪರಮಾತ್ಮನೊಂದಿಗೆ ಒಂದುಗೂಡಿಸುವುದೇ ಯೋಗ. ರಾಜ ಯೋಗ ಮನಸ್ಸಿನ ಏಕಾಗ್ರತೆಯ ಮೂಲಕ ಅದನ್ನು ಪಡೆಯು ವುದು. ಏಕಾಗ್ರತೆ ಎಲ್ಲಾ ಮಾರ್ಗಗಳಲ್ಲಿಯೂ ಇರಬೇಕು. ಆದರೆ ಇದರಲ್ಲಿ ಹೆಚ್ಚು ಇರಬೇಕು. ಮುಕ್ತಿ ಎನ್ನುವುದು ಎಲ್ಲಿಯೋ ಹೊರಗಿನಿಂದ ಹೊಸದಾಗಿ ಪಡೆಯುವ ಅವಸ್ಥೆಯಲ್ಲ. ಅದಾಗಲೇ ನಮ್ಮದಾಗಿದೆ. ಪರಮಾತ್ಮ ಆಗಲೇ ನಮ್ಮ ಅಂತ ರಾಳದಲ್ಲಿ ಕುಳಿತಿರುವನು. ಆದರೆ ನಾವು ಅವನ ಕಡೆ ನೋಡುತ್ತಿಲ್ಲ. ಈಗ ನಮ್ಮ ಮನಸ್ಸು ಬಹಿರ್ಮುಖವಾಗಿದೆ. ಯಾವಾಗಲೂ ಹೊರಗೆ ಹೋಗುತ್ತಿದೆ. ಸುಖವನ್ನು ಹುಡುಕು ತ್ತಿದೆ. ಸುಖವೇನೋ ಸಿಕ್ಕುವುದು, ಜೊತೆಗೆ ಕಷ್ಟವೂ ಸಿಕ್ಕು ವುದು. ಹೊರಗೆ ಹೋಗುವ ಮನಸ್ಸನ್ನು ನಿಗ್ರಹಿಸಿ ಅದರ

ಮೂಲಕ್ಕೆ ಅಟ್ಟುವುದು, ಅಲ್ಲಿರುವ ಪರಮಾತ್ಮನನ್ನು ದರ್ಶನ ಮಾಡುವುದು, ರಾಜಯೋಗದ ಗುರಿ.

ರಾಜಯೋಗದಲ್ಲಿ ಎಂಟು ಮೆಟ್ಟಲುಗಳು ಇವೆ. ಅವೇ ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣ ಧ್ಯಾನ ಸಮಾಧಿ ಎಂಬುವು. ಇಲ್ಲಿ ಜೋಪಾನವಾಗಿ ಒಂದು ಮೆಟ್ಟಲಾದ ಮೇಲೆ ಅದರ ಮೇಲಿನ ಮೆಟ್ಟಲನ್ನು ಹತ್ತಿ ಹೋದರೆ ಕೊನೆಗೆ ಸಮಾಧಿಯಲ್ಲಿ ಜೀವಾತ್ಮ ಪರಮಾತ್ಮನಲ್ಲಿ ಐಕ್ಯವಾಗುವುದು.

ಎಂಟು ಮೆಟ್ಟಲುಗಳಲ್ಲಿ ಮೊದಲನೆಯ ಎರಡು ಮೆಟ್ಟಲು ನೀತಿಗೆ ಸಂಬಂಧಪಟ್ಟಿರುವುದು. ಈ ಮಾರ್ಗ ಮನೋ ಏಕಾಗ್ರತೆಯ ಮಾರ್ಗ. ಇಲ್ಲಿ ನೀತಿ ಏಕೆ ಎಂದು ಪ್ರಶ್ನಿಸಬಹುದು. ಆದರೆ ನೀತಿಯೇ ತಳಹದಿ, ಚಾರಿತ್ರಶುದ್ಧಿಯೇ ಮೂಲ. ಇಲ್ಲಿಂದ ನಾವು ಹೊರಡಬೇಕಾಗಿದೆ. ಚಾರಿತ್ರಶುದ್ಧಿಯ ಕಡೆ ನಾವು ಗಮನಕೊಡದೆ ಪ್ರಾಣಾಯಾಮ ಧ್ಯಾನಾದಿಗಳನ್ನು ಮಾಡಿದರೆ ಫಲಕಾರಿಯಾಗುವುದಿಲ್ಲ. ಆದಕಾರಣವೇ ರಾಜಯೋಗದಲ್ಲಿ ಮೊದಲ ಎರಡು ಮೆಟ್ಟಲುಗಳಲ್ಲಿ ನೀತಿಯ ಆವಶ್ಯಕತೆಯನ್ನು ಒತ್ತಿ ಹೇಳುವರು. ಯಮ ಎಂದರೆ ಅಹಿಂಸೆ, ಸತ್ಯ ಅಸ್ತೇಯ, ಬ್ರಹ್ಮಚರ್ಯ ಅಪರಿಗ್ರಹ. ಯಾರಿಗೂ ಹಿಂಸೆಯನ್ನು ಕೊಡಕೂಡದು. ಹಿಂಸೆ ಪ್ರತಿಹಿಂಸೆಯನ್ನು ಮತ್ತೊಬ್ಬರಿಂದ ನಮಗೆ ತರುವುದು. ಕಾಯಾವಾಚಾಮನಸಾ ಯಾರಿಗೂ ಹಿಂಸೆ ಕೊಡದಿರುವುದೇ ಮೊದಲು ಬೇಕಾಗಿರುವುದು. ಅನಂತರವೇ ಸತ್ಯ ಹೇಳುವುದು, ಸತ್ಯವಂತೆ ಬಾಳುವುದು. ದೇವರಿಗೆ ಮತ್ತೊಂದು ಹೆಸರೇ ಸತ್ಯನಾರಾಯಣ. ಅವನನ್ನು ಒಲಿಸಿಕೊಳ್ಳಬೇಕಾದರೆ ಸತ್ಯವ್ರತಿಯಾಗಿರಬೇಕು. ಅಸ್ತೇಯ

ಎಂದರೆ ಇತರರ ವಸ್ತುಗಳನ್ನು ಕದಿಯದೆ ಇರುವುದು. ಇಲ್ಲಿ ಕದಿಯದೇ ಇರುವುದು ಎಂಬುದನ್ನು ಬಹಳ ಆಳವಾಗಿ ನೋಡಬೇಕಾಗಿದೆ. ನಾವು ಶ್ರಮಪಡದೇ ಯಾವುದನ್ನೂ ಇತರರಿಂದ ಪಡೆಯಕೂಡದು ಎನ್ನುವವರೆಗೆ ಅಸ್ತೇಯ ಹೋಗಿರುವುದು. ಬ್ರಹ್ಮಚರ್ಯ; ರಾಜಯೋಗದ ಹಾದಿಯಲ್ಲಿ ನಡೆಯಲು ಇಚ್ಛಿಸುವವನು ಜಿತೇಂದ್ರಿಯನಾಗಿರಬೇಕು. ಪ್ರಾಪಂಚಿಕ ಸುಖಗಳನ್ನು ಮೆಲ್ಲುತ್ತ ಜೊತೆಗೆ ಧ್ಯಾನ ಸಮಾಧಿಗಳನ್ನು ಪಡೆಯುತ್ತೇನೆ ಎಂದು ಭಾವಿಸಿದರೆ ಅದೊಂದು ಭ್ರಾಂತಿ. ಅದರಂತೆ ಯಾರಿಂದಲೂ ಯಾವ ದಾನವನ್ನೂ ಸ್ವೀಕರಿಸದೆ ಇರುವುದು. ಯಾವಾಗ ನಾವು ಮತ್ತೊಬ್ಬರಿಗೆ ಕೈಯೊಡ್ಡುವೆವೋ ಆಗ ನಾವು ಅವರಿಗೆ ಋಣಿಗಳಾಗಬೇಕಾಗುವುದು. ಅವರ ಹಂಗಿಗೆ ಒಳಗಾಗುವೆವು, ಗುಲಾಮರಾಗುವೆವು, ಸ್ವಾತಂತ್ರ್ಯವನ್ನು ಕಳೆದುಕೊಳ್ಳುವೆವು. ಆತ ನಿರ್ಭಯನಾಗಿ ಭಗವಂತನನ್ನು ಉಪಾಸನೆ ಮಾಡಲಾರ. ಅದಕ್ಕಾಗಿಯೇ ಅಪರಿಗ್ರಹ ಅತ್ಯಂತ ಮುಖ್ಯವಾದ ಶೀಲಸಂಪತ್ತಿ ರಾಜಯೋಗಿಗೆ.

ಅನಂತರವೇ ನಿಯಮವೆಂಬ ನಿಯಮಾವಳಿಗೆ ಬರುವೆವು. ಅದೇ ಶೌಚ, ತೃಪ್ತಿ, ತಪಸ್, ಸ್ವಾಧ್ಯಾಯ, ಈಶ್ವರಪ್ರಣಿದಾನ. ಶುಚಿಯಾಗಿರುವುದು; ದೈಹಿಕವಾಗಿ ಶುಚಿಯಾಗಿರುವುದು, ಮಡಿಬಟ್ಟೆಯನ್ನು ಹಾಕಿಕೊಳ್ಳುವುದು ಮಾತ್ರವಲ್ಲ, ಮನಸ್ಸಿನ ಮೈಲಿಗೆಯನ್ನೂ ತೊಳೆದು ಅದನ್ನು ಶುಚಿಯಾಗಿ ಇಟ್ಟಿರುವುದು. ತೃಪ್ತಿ; ದೇವರು ಎಷ್ಟು ಕೊಡುವನೋ ಅದರಲ್ಲಿ ತೃಪ್ತಿ ಇರಬೇಕು. ಅಂದರೆ ಆಧ್ಯಾತ್ಮಿಕ ಜೀವನದಲ್ಲಿ ತೃಪ್ತಿ ಇರಬೇಕೆಂದಲ್ಲ. ಒಂದು ದೃಷ್ಟಿಯಿಂದ ನೋಡಿದರೆ

ಪ್ರಾಪಂಚಿಕ ಆಸೆ ಆಕಾಂಕ್ಷೆಗಳಿಗೆ ನಿಜವಾಗಿ ತೃಪ್ತಿಯಾದರೂ ಎಲ್ಲಿದೆ? ಅದನ್ನು ತೃಪ್ತಿಪಡಿಸಿದಷ್ಟೂ ಅತೃಪ್ತಿ ಹೆಚ್ಚುತ್ತಿರುವುದು. ಯೋಗಿಯಾಗಲಿಚ್ಛಿಸುವವನು ಇದನ್ನು ಅರಿತಿರುವನು. ಜೊತೆಗೆ ತಪಸ್ ಇರಬೇಕು. ಪೂಜೆ ಜಪ ಮುಂತಾದುವು ಇರಬೇಕು. ಸ್ವಾಧ್ಯಾಯ ಎಂದರೆ ಆಧ್ಯಾತ್ಮಿಕಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನು ಓದುತ್ತಿರಬೇಕು. ಒಂದು ಸಲ ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಪಟ್ಟ ವಿಷಯವನ್ನು ಓದಿದರೆ ಸಾಲದು. ಪದೇ ಪದೇ ಅದನ್ನು ಓದುತ್ತಿರಬೇಕು. ಓದಿದ ವಿಷಯಗಳನ್ನು ಕುರಿತು ಮನನ ಮಾಡುತ್ತಿರಬೇಕು. ಆಗ ಮಾತ್ರ ಅದು ನಮ್ಮ ಜೀವನದ ಅಂತರಾಳದಲ್ಲಿ ತನ್ನ ಪ್ರಭಾವವನ್ನು ಬಿಡುವುದು. ಅನಂತರವೇ ಈಶ್ವರನ ಮೇಲೆ ಭಕ್ತಿಶ್ರದ್ಧೆಗಳಿರಬೇಕು. ಆ ಪರಂಜ್ಯೋತಿಯನ್ನು ನಾವು ಪ್ರಾರ್ಥಿಸಿ ಅವನ ಕೃಪೆ ಬೇಡಬೇಕು. ಇವುಗಳೆಲ್ಲಾ ಆಧ್ಯಾತ್ಮಿಕ ಯಾತ್ರಿಕನ ಗಂಟಿನಲ್ಲಿ ಇರಬೇಕಾದ ಸಾಮಗ್ರಿ.

ಇದಾದನಂತರವೇ ಆಸನ ಬರುವುದು. ಆಸನ ಎಂದರೆ ಒಂದೆಡೆ ದೀರ್ಘಕಾಲ ಕುಳಿತುಕೊಳ್ಳುವುದು. ಯಾವ ರೀತಿ ಕುಳಿತುಕೊಂಡರೆ ನಮಗೆ ನಿದ್ರೆ, ಆಕಳಿಕೆ, ಸೋಮಾರಿತನ ಬರುವುದಿಲ್ಲವೋ ಅಂತಹ ಆಸನದಲ್ಲಿ ಕುಳಿತುಕೊಳ್ಳಬೇಕು. ಇಲ್ಲ ಆಸನದ ಹೆಸರಿನಲ್ಲಿ ಹಲವಾರು ಹಟಯೋಗದ ಆಸನಗಳೆಲ್ಲಾ ಬರುತ್ತವೆ. ಆದರೆ ರಾಜಯೋಗಿಗೆ ಇತರ ಆಸನಗಳ ಆಸರೆ ಅಷ್ಟು ಬೇಕಾಗಿಲ್ಲ. ಸುಖಾಸನ ಅಥವಾ ಪದ್ಮಾಸನ ಒಂದರಲ್ಲಿ ಮನಸ್ಸು ನೆಲಸಿದರೆ ಸಾಕು. ಕ್ರಮೇಣ ಅವನು ಯೋಗ ಜೀವನದಲ್ಲಿ ಮುಂದುವರಿಯುವನು.

ಪ್ರಾಣಾಯಾಮವೇ ಅನಂತರದ ಮೆಟ್ಟಲು. ನಾವು ಬಿಡುವ ಉಸಿರಿಗೂ ನಾವು ಮಾಡುವ ಆಲೋಚನೆಗೂ ಒಂದು ನಿಕಟ ಸಂಬಂಧವನ್ನು ಹಿಂದಿನವರು ಕಂಡುಹಿಡಿದರು. ಒಂದು ಮತ್ತೊಂದರ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದೆ. ನಮ್ಮ ಮನಸ್ಸು ಕೋಪತಾಪಗಳಿಗೆ ತುತ್ತಾದಾಗ ಉಸಿರು ಬಿಡುವುದು ಜಾಸ್ತಿಯಾಗುವುದು. ಯಾವಾಗ ಪ್ರಶಾಂತಚಿತ್ತರಾಗಿರುವೆವೋ ಆಗ ಉಸಿರು ತನಗೆ ತಾನೇ ನಿಧಾನವಾಗುತ್ತಾ ಬರುವುದು. ತತ್‌ಕ್ಷಣ ಆಲೋಚನೆಗಳನ್ನೆಲ್ಲಾ ನಿಗ್ರಹಿಸುವುದು ಎಲ್ಲರಿಗೂ ಸಾಧ್ಯವಿಲ್ಲ. ಆದರೆ ಉಸಿರನ್ನು ನಿಗ್ರಹಿಸುವುದು ಸುಲಭ. ರಾಜಯೋಗಿ ಉಸಿರಾಟದ ಮೂಲಕ ಮನ ಪ್ರವೇಶಮಾಡಿ ಅದನ್ನು ನಿಗ್ರಹಿಸಲು ಯತ್ನಿಸುವನು. ನಾವು ಉಸಿರನ್ನು ಬಿಡುವುದೂ ಸೆಳೆದುಕೊಳ್ಳುವುದೂ ಪ್ರಾಣಕ್ರಿಯೆಯಲ್ಲಿ ಒಂದು. ಹೃದಯ ಆಡುತ್ತಿರುವುದು ಮತ್ತು ನಮ್ಮ ದೇಹದಲ್ಲಿ ಇತರ ಕ್ರಿಯೆಗಳಾಗುತ್ತಿರುವುದೆಲ್ಲ ಪ್ರಾಣದ ಪ್ರಭಾವವೇ. ಆದರೆ ನಮಗೆ ಅದರ ಮೇಲೆ ಸ್ವಾಧೀನವಿಲ್ಲ. ಉಸಿರಾಟದ ಮೇಲೆ ನಮಗೆ ಸ್ವಾಧೀನವಿದೆ. ಆ ಉಸಿರಿಗೂ ಮಾಡುವ ಆಲೋಚನೆಗೂ ಇರುವ ಸಂಬಂಧವನ್ನು ರಾಜಯೋಗಿ ಕಂಡುಹಿಡಿದಿರುವನು. ಈ ಮಾರ್ಗದ ಮೂಲಕ ರಾಜಯೋಗಿ ಮನೋನಿಗ್ರಹಕ್ಕೆ ಯತ್ನಿಸುವನು.

ಇದಾದಮೇಲೆ ಬರುವುದೇ ಪ್ರತ್ಯಾಹಾರ. ಇಂದ್ರಿಯಗಳು ಹೊರಗೆ ಹೋಗುವುದು ಹಿಂದಿನಿಂದಲೂ ಬಂದ ಒಂದು ಅಭ್ಯಾಸವಾಗಿದೆ. ನಮ್ಮ ಮನಸ್ಸಿನ ಅಶಾಂತಿಗೆಲ್ಲಾ ಅದೇ ಕಾರಣ. ಹೊರಗಿನ ಪಂಚೇಂದ್ರಿಯಗಳೆಂಬ ಕಿಟಕಿಯ ಮೂಲಕ ಕಲ್ಲುಗಳು ಪ್ರತಿ ಕ್ಷಣದಲ್ಲಿಯೂ ಚಿತ್ತಸರೋವರದ

ಮೇಲೆ ಬಿದ್ದು ಅದರ ಸ್ವಾಸ್ಥ್ಯಕ್ಕೆ ಭಂಗ ತರುತ್ತಿದೆ. ಪಂಚೇಂದ್ರಿಯಗಳು ಬಾಹ್ಯಮುಖವಾಗುವುದನ್ನು ತಡೆಯುವುದೇ ಪ್ರತ್ಯಾಹಾರ.

ಇದಾದ ನಂತರವೇ ಧಾರಣ. ದೇಹ ಅಥವಾ ಮನಸ್ಸಿನ ಯಾವುದಾದರೂ ಒಂದು ಭಾಗದ ಮೇಲೆ ಮನಸ್ಸನ್ನು ಕೇಂದ್ರೀಕರಿಸಲು ಯತ್ನಿಸುವನು. ಅದರಲ್ಲಿ ಯಶಸ್ವಿಯಾದ ಮೇಲೆ ಧ್ಯಾನ ಪ್ರಾರಂಭವಾಗುವುದು. ಭಗವಂತನ ಯಾವುದಾದರೂ ಆಕಾರವನ್ನೋ ಗುಣವನ್ನೋ ತೆಗೆದುಕೊಂಡು ಅದರಲ್ಲೇ ಮನಸ್ಸನ್ನು ಏಕಾಗ್ರಗೊಳಿಸಿ ತನ್ಮಯನಾಗಲು ಯತ್ನಿಸುವನು. ಎಂದು ಹೀಗೆ ಧ್ಯಾನಿಸುತ್ತಿರುವಾಗ ತನ್ನನ್ನೇ ಮರೆತು ದೇವರಲ್ಲಿ ಐಕ್ಯವಾಗುವನೋ ಅದೇ ಸಮಾಧಿ.

ರಾಜಯೋಗಿಯ ಕೈಯಲ್ಲಿ ಇರುವ ಬ್ರಹ್ಮಾಸ್ತ್ರ ಮನೋ ಏಕಾಗ್ರತೆ. ವಿಜ್ಞಾನಿಯೂ ಇದನ್ನೇ ವಶಪಡಿಸಿಕೊಂಡಿರುವನು. ಆದರೆ ಅದನ್ನು ಬಾಹ್ಯವಸ್ತುವಿನ ಮೇಲೆ ಹರಿಯಬಿಟ್ಟಿರುವನು. ಇದರಿಂದ ವಸ್ತುಗಳ ಅಂತರಾಳದ ಸತ್ಯ ವ್ಯಕ್ತವಾಗಿದೆ, ಅದರಲ್ಲಿ ಸುಪ್ತವಾಗಿರುವ ಶಕ್ತಿಯನ್ನು ಅವನು ಕರಗತಮಾಡಿಕೊಂಡಿರುವನು. ಇದರಿಂದ ಏರೋಪ್ಲೇನ್, ಸ್ಪುಟ್ನಿಕ್, ಹೈಡ್ರೋಜನ್ ಬಾಂಬ್ ಮುಂತಾದುವನ್ನು ಕಂಡುಹಿಡಿದಿರುವನು. ಆದರೆ ಇದರಿಂದ ಪ್ರಪಂಚಕ್ಕೆ ಶಾಂತಿ ಬಂತೆ? ಯೋಗಿ ಅದನ್ನು ತನ್ನ ಮೇಲೆ ತಿರುಗಿಸಿಕೊಂಡು ತನ್ನ ನೈಜಸ್ಥಿತಿಯನ್ನು ಅರಿತುಕೊಂಡು ಅವನ್ನು ಭಗವಂತನಲ್ಲಿ ವಿಲೀನಗೊಳಿಸುವುದಕ್ಕೆ ಮನೋಏಕಾಗ್ರತೆಯನ್ನು ಉಪಯೋಗಿಸಿಕೊಂಡಿರುವನು. ಇಂತಹ ಯೋಗಿ ಮಾತ್ರ ಜಗತ್ತಿಗೆ ಶಾಂತಿ ನೀಡಬಲ್ಲ. ಇದೇ ರಾಜಯೋಗದ ಗುರಿ.

## ಜ್ಞಾನಯೋಗ

ಜ್ಞಾನದ ಮೂಲಕ ಜೀವಾತ್ಮ ಪರಮಾತ್ಮನಲ್ಲಿ ಐಕ್ಯವಾಗುವುದನ್ನೇ ಜ್ಞಾನಯೋಗ ಎನ್ನುವುದು. ಇಲ್ಲಿ ವಿಚಾರ ತನ್ನ ಪರಾಕಾಷ್ಠತೆಯನ್ನು ಮುಟ್ಟುವುದು. ನಾವು ವಿಚಾರವನ್ನು ಬಾಹ್ಯ ಪ್ರಪಂಚದ ಮೇಲೆ ಬೀರಿರುವೆವು. ಅದರಿಂದ ಹಲವು ಬಗೆಯ ಶಾಸ್ತ್ರಗಳೆಲ್ಲ ಅಭಿವೃದ್ಧಿಯಾಗಿವೆ. ಇಲ್ಲಿ ವಿಚಾರವನ್ನು ನಾನು ಯಾರು ಎಂಬುದನ್ನು ತಿಳಿಯಲು ಪ್ರಯತ್ನಿಸುವುದಕ್ಕೆ ಉಪಯೋಗಿಸಿ ಅದರಲ್ಲಿ ಯಶಸ್ವಿಯಾಗಿರುವರು. ನಾವು ಅಷ್ಟೊಂದು ಕೆಲಸಮಾಡುತ್ತಿರುವೆವು. ನಮಗಾಗಿ ಬೇಕಾದಷ್ಟನ್ನು ಕೂಡಿಡುತ್ತಿರುವೆವು. ನಮಗಾಗಿ ಇತರರೊಡನೆ ಪ್ರೀತಿದ್ವೇಷ. ನಾನು ಎಂಬ ಮೃಗವನ್ನು ತೃಪ್ತಿಪಡಿಸುವುದಕ್ಕಾಗಿ ಇಡೀ ಪ್ರಪಂಚವಿದೆ ಎಂದು ಭಾವಿಸುವೆವು. ನಾವು ಯಾವುದಕ್ಕಾಗಿ ಇಷ್ಟೊಂದು ದುಡಿಯುತ್ತಿರುವೆವೋ ಅದನ್ನೊಮ್ಮೆ ಪ್ರಶ್ನೆಮಾಡಿ, ಆ ನಾನು ಎಂಬುದು ಯಾವುದು ಎಂದು ಇದನ್ನು ಕಂಡುಹಿಡಿಯಲು ಯತ್ನಿಸಿ. ಇದರಷ್ಟು ಅಜ್ಞಾತ ಯಾವುದೂ ಇಲ್ಲ. ಈ ದೇಹ ನಾನೆಂದು ಭಾವಿಸುವೆವು. ಆದರೆ ಈ ದೇಹಕ್ಕೆ ಒಂದು ಜನನವಿದೆ ಮರಣವಿದೆ. ಇದು ಈಗ ಇದ್ದಂತೆ ಇನ್ನು ಕೆಲವು ವರ್ಷಗಳಾದ ಮೇಲೆ ಇರುವುದಿಲ್ಲ. ಇದರಲ್ಲಿ ಯಾವ ಭಾಗವನ್ನು ಹಿಡಿದುಕೊಂಡು ಅದಕ್ಕೆ ನಾನು ಎಂಬ ಚೀಟಿಯನ್ನು ಅಂಟಿಸಲಿ? ಮಗುವೆ? ದೊಡ್ಡವರಿಗೆ ಮಗುವಾಗಿರಲು ಆಸೆಯಿಲ್ಲ. ಯೌವನವೆ? ಹೌದು, ಅದರ ಮೇಲೇನೋ ತುಂಬಾ ಪ್ರೀತಿ. ಆದರೆ ನಾವು ಎಷ್ಟೇ ಆಶಿಸಿದರೂ ಯೌವನ ಅನುಭವಿಸುತ್ತಿರುವಾಗಲೇ ಜರೆಗೆ ಜಾರುವುದು. ಇನ್ನು ವೃದ್ಧಾಪ್ಯವೆ? ಇದೊಂದು

ಶೋಚನೀಯ ಸ್ಥಿತಿ. ಮಾಡುವುದಕ್ಕೆ ಶಕ್ತಿಯಿಲ್ಲ. ದುಡಿಯು ವುದಕ್ಕೆ ಶಕ್ತಿಯಿಲ್ಲ. ಪಂಚೇಂದ್ರಿಯಗಳೋ ಒಂದಾದ ಮೇಲೊಂದು ರಿಪೇರಿಗೆ ಬರುತ್ತಿರುತ್ತವೆ. ಆ ಸ್ಥಿತಿ ಅನು ಭವಿಸುತ್ತಿರುವವನಿಗೊಂದು ಭಾರ. ಅವನನ್ನು ಸಹಿಸುತ್ತಿರು ವವನಿಗೊಂದು ಭಾರ.

ದೇಹ ಅಲ್ಲ ನಾನು ಎಂದರೆ. ಏಕೆಂದರೆ ಆ ದೇಹವನ್ನು ನಾನು ಸಾಕ್ಷಿಯಂತೆ ನಿಂತು ನೋಡುತ್ತಿರುವೆ. ದೇಹ ನನಗೆ ಒಂದು ಮನೆಯಂತೆ. ಆದರೆ ನಾನೇ ಆ ಮನೆಯಲ್ಲ. ನಾನು ಬುದ್ಧಿ ಅಹಂಕಾರ ಎಂದು ಸ್ವಲ್ಪ ಮುಂದುವರಿದಿರುವವರು ಭಾವಿಸುವರು. ಆದರೆ ಈ ಬುದ್ಧಿಯೂ ಬದಲಾಯಿಸಿರುತ್ತದೆ. ಕೆಲವು ವೇಳೆ ಕವಡಿರುವುದು, ಕೆಲವು ವೇಳೆ ಚುರುಕಾಗಿರು ವುದು. ಇದೂ ಕೂಡ ಒಂದು ಯಂತ್ರದಂತೆ ಎಂದು ನನಗೆ ಕೆಲವು ಕಾಲದಮೇಲೆ ಭಾಸವಾಗುವುದು. ಹಾಗಾದರೆ ಅದರ ಹಿಂದೆ ಯಾವುದಿರುವುದು ಎಂಬ ಪ್ರಶ್ನೆ ಹಾಕಿದಾಗ ನಾನೆಂಬ ಆತ್ಮ ಕಾಣುವುದು. ಆ ನಾನು ಎಂಬುದು ಉಪಾಧಿಗಳಿಂದ ಕೂಡಿದಾಗ ಜೀವಾತ್ಮ, ಉಪಾಧಿಗಳನ್ನೆಲ್ಲಾ ಕಳೆದ ಮೇಲೆ ಅದೇ ಪರಮಾತ್ಮನೆಂದು ವ್ಯಕ್ತವಾಗುವುದು. ಅಷ್ಟೊಂದು ಪರಮಾತ್ಮರು ಇರುವುದು ಸಾಧ್ಯವೆ? ಇಲ್ಲ ಒಂದೇ ಪರಮಾತ್ಮ. ಹಾಗಾದರೆ ಇಷ್ಟೊಂದು ಜೀವಾತ್ಮರನ್ನು ನೋಡುತ್ತಿರುವೆವಲ್ಲ ಎಂದು ಪ್ರಶ್ನಿಸಬಹುದು. ಹೌದು ನೋಡುತ್ತಿರುವೆವು. ಅದು ಅಜ್ಞಾನದಲ್ಲಿ. ಎಲ್ಲಾ ಜೀವಾತ್ಮರಲ್ಲಿ ಬೆಳಗುತ್ತಿರುವ ಚೈತನ್ಯ ವೊಂದೇ. ಸೂರ್ಯನೊಬ್ಬನೇ ಅನಂತ ಹಿಮಮಣಿಗಳಲ್ಲಿ ಬೆಳಗು ವಾಗ ಪ್ರತಿಯೊಂದು ಹಿಮಮಣಿಯಲ್ಲಿಯೂ ಒಂದೊಂದು ಸೂರ್ಯವಿರುವಂತೆ. ಆದರೆ ನಿಜವಾಗಿರುವುದೊಂದೇ ಸೂರ್ಯ.

ಎಂದು ಒಬ್ಬ ಬ್ರಹ್ಮನನ್ನು ಅರಿಯುವನೋ ಆಗ ಅವನೂ ಬ್ರಹ್ಮನೇ ಆಗುವನು ಎಂಬುದೇ ಜ್ಞಾನಯೋಗದ ಹಾದಿ.

ಆದಿಯಿಂದ ಅಂತ್ಯದವರೆಗೆ ಇಲ್ಲಿ ವಿಶೇಷವಾಗಿ ಉಪಯೋಗಿಸುವ ಅಸ್ತ್ರ ವಿಚಾರವೊಂದೇ. ವಿಚಾರವನ್ನು ನಿರ್ಭಯವಾಗಿ ಅನುಸರಿಸುವನು ಅವನು. ವಿಚಾರ ಎಲ್ಲಿಗೆ ಒಯ್ದರೆ ಅಲ್ಲಿಗೆ ಹೋಗಲು ಸಿದ್ಧ. ಅದಕ್ಕಾಗಿ ಏನನ್ನು ಬೇಕಾದರು ತೆರಲು ಸಿದ್ಧನಾಗಿರಬೇಕು. ಈ ಮಾರ್ಗದಲ್ಲಿ ಹೋಗಬೇಕಾದರೆ ಮೊದಲು ಸಾಧನ ಚತುಷ್ಟಯದ ಗರಡಿಯಲ್ಲಿ ಚೆನ್ನಾಗಿ ಪಳಗಿರಬೇಕು. ಇದಿಲ್ಲದೆ ಸುಮ್ಮನೆ ವಿಚಾರಮಲ್ಲನಾದರೆ ಅದರಿಂದ ಸತ್ಯ ನಮ್ಮ ಹೃದ್ಗತವಾಗುವುದಿಲ್ಲ. ಮುಂದೆ ಬರುವುದೇ ಸಾಧನ ಚತುಷ್ಟಯದ ಶಿಸ್ತು. ನಿತ್ಯ ಅನಿತ್ಯ ವಸ್ತು ವಿವೇಕ. ಪ್ರಪಂಚದಲ್ಲಿ ನಿತ್ಯ ಯಾವುದು, ಅನಿತ್ಯ ಯಾವುದು ಎಂಬುದನ್ನು ವಿಮರ್ಶಿಸಬೇಕು. ನಮ್ಮ ನಿತ್ಯ ಬಳಕೆಯಲ್ಲಿ ಸತ್ಯಮಿಥ್ಯಗಳು ಬೆರೆತು ಹೋಗಿವೆ. ಅನಿತ್ಯವನ್ನು, ಇಂದು ಇದ್ದು ನಾಳೆ ಮಂಗಮಾಯವಾಗುವುದನ್ನು, ನಿತ್ಯವೆಂದು ಭ್ರಮಿಸುವೆವು. ಅದಕ್ಕಾಗಿಯೇ ಎಂತೋ ಹೇಗೋ ದೇಹ ಪೋಷಣೆ, ಎಂತೋ ಹೇಗೋ ದ್ರವ್ಯಾರ್ಜನೆ, ಲಾಭ ಕೀರ್ತಿ ಇವುಗಳನ್ನು ಸಂಪಾದಿಸುವೆವು. ಆದರೆ ಇದಾವುದೂ ನಮ್ಮ ಹಿಂದೆ ಬರುವುದಿಲ್ಲ. ಇವೆಲ್ಲಾ ಮಿಥ್ಯ. ಸದಾಕಾಲದಲ್ಲಿ ಯಾವುದು ನಮ್ಮದಾಗಿರುವುದೋ ಅದೊಂದೇ ಸತ್ಯ. ಅದು ಪರಮಾತ್ಮವಸ್ತು ಮಾತ್ರ. ಇದು ಮನಸ್ಸಿಗೆ ಚೆನ್ನಾಗಿ ನಾಟಿರಬೇಕು. ಮೊದಲನೆ ಶಿಸ್ತು ವಿವರಿಸುವುದು ಇದನ್ನು. ಅನಂತರವೇ ಇಹ ಮತ್ತು ಪರಲೋಕದ ಫಲಗಳನ್ನೆಲ್ಲಾ ನಿಕೃಷ್ಟ ದೃಷ್ಟಿಯಿಂದ ನೋಡಬೇಕು. ಇವೆಲ್ಲಾ ನಮ್ಮನ್ನು ಬಂಧನಕ್ಕೆ ಗುರಿಮಾಡುವುದು.

ಇಹಲೋಕದ ಅಧಿಕಾರ, ಐಶ್ವರ್ಯ, ಕೀರ್ತಿ ಹೇಗೆ ನಮ್ಮನ್ನು ಬಂಧನಕ್ಕೆ ಒಳಗುಮಾಡುವುದೋ ಹಾಗೆಯೇ ಕಾಲವಾದ ಮೇಲೆ ಯಾವುದಾದರೂ ಒಳ್ಳೆಯ ಲೋಕದಲ್ಲಿ ಚೆನ್ನಾಗಿ ಅನುಭವಿಸಬೇಕೆಂಬ ಆಸೆಯೂ ಅಷ್ಟೇ ಬಂಧನಕಾರಿ. ಇಂದ್ರಪಟ್ಟವನ್ನು ಕೂಡ ಕಸದ ಬುಟ್ಟಿಯಂತೆ ನೋಡಲು ಸಿದ್ಧನಾಗಿರಬೇಕು ಒಬ್ಬ ಜ್ಞಾನಯೋಗಿಯಾಗಬೇಕಾದರೆ.

ಅನಂತರವೇ ನೀತಿಗೆ ಸಂಬಂಧಪಟ್ಟ ಈ ಆರುಗುಣಗಳು ಅವನಲ್ಲಿ ಮನೆಮಾಡಿಕೊಂಡಿರಬೇಕು. ಮೊದಲನೆಯದೆ ಶಮ, ವಿಷಯವಸ್ತುಗಳನ್ನು ಅರಸಿಕೊಂಡು ಹೋಗುವ ಮನಸ್ಸನ್ನು ನಿಗ್ರಹಿಸಬೇಕು. ವಿಷಯ ಪ್ರಪಂಚವನ್ನು ಮನದಲ್ಲಿ ಕಲ್ಪಿಸಿಕೊಂಡು ಅದರಮೇಲೆ ಆಸೆಹುಟ್ಟಿ ಬಾಯೂರುವುದು. ಇದೇ ಮುಂದಿನ ಗದ್ದಲಕ್ಕೆಲ್ಲಾ ಕಾರಣ. ಅನಂತರವೇ ದಮ. ಸ್ಥೂಲವಾದ ಇಂದ್ರಿಯಗಳನ್ನು ಆಯಾ ವಸ್ತುಗಳ ಸಂಬಂಧದಿಂದ ತಡೆಯುವುದು. ನನಗೆ ಮನಸ್ಸಿನಲ್ಲೇನೂ ಆಸೆಯಿಲ್ಲ. ಸುಮ್ಮನೆ ಅದನ್ನು ಮಾಡುತ್ತಿರುವೆ ಎನ್ನುವೆವು ಕೆಲವು ವೇಳೆ. ನಮ್ಮನ್ನು ನಾವೇ ಮೋಸಮಾಡಿಕೊಳ್ಳುತ್ತಿರುವೆವು. ಹೊರಗೆ ಆಸೆ ಕಾಣದಿದ್ದರೂ ಒಳಗೆ ಆಸೆ ಇದೆ. ಆ ಕಿಡಿಗೆ ಸ್ವಲ್ಪ ಗಾಳಿ ತಾಕಿದ ಮೇಲೆ ಅದೇ ಧಗಧಗಿಸುವ ಅಗ್ನಿಯಾಗುವುದು. ಮನಸ್ಸಿನಲ್ಲಿ ನಿಗ್ರಹಿಸುವುದು ಮಾತ್ರವಲ್ಲ, ಸ್ಥೂಲವಾಗಿಯೂ ನಿಗ್ರಹಿಸಬೇಕು. ಅನಂತರವೇ ತಿತಿಕ್ಷ, ಸಹಿಷ್ಣುತೆ. ಈ ಪ್ರಪಂಚದಲ್ಲಿ ಅನೇಕವೇಳೆ ನಾವು ನಿಂದೆಗೆ ಪಾತ್ರರಲ್ಲದಿದ್ದರೂ, ಶಿಕ್ಷೆಗೆ ಪಾತ್ರರಲ್ಲದೇ ಇದ್ದರೂ, ನಮ್ಮ ಮೇಲೆ ಟೀಕೆಯ ಸುರಿಮಳೆ ಸುರಿಯುವುದು. ಇವನ್ನು ಸಹಿಸಬೇಕಾಗಿದೆ. ಇದಕ್ಕೆ ಪ್ರತಿಮಾಡಲು ಹೋದರೆ ನಾವು ಬಹಿರ್ಮುಖರಾಗಿ

ಪ್ರಪಂಚದ ಕಡೆ ವಾಲುವೆವು. ಉಪರತಿ ಅನಂತರ ನಾವು ಕಲಿಯಬೇಕಾದುದು. ಮನಸ್ಸು ಒಂದು ವಸ್ತುವಿನ ಮೇಲೆ ಆಸೆಯನ್ನು ಹೊರಗಿನಿಂದ ಬಿಟ್ಟಿರಬಹುದು. ಅದನ್ನು ವಿಷಯ ವಸ್ತುಗಳ ಕಡೆ ಬಾಹ್ಯದಲ್ಲಿ ಕೊಂಡೊಯ್ಯದೇ ಇರಬಹುದು. ಆದರೆ ಒಳಗೆ ಇನ್ನೂ ಸ್ವಲ್ಪ ಆಸೆಯ ಕಾವು ಇದೆ. ಅದನ್ನು ಆರಿಸಬೇಕು. ನಾವು ಒಲೆಯಲ್ಲಿ ಬೆಂದ ಗೆಣಸನ್ನು ಹೊರಗೆ ತೆಗೆಯಬಹುದು. ಅದರ ಹೊರಭಾಗ ಸ್ವಲ್ಪ ಹೊತ್ತಾದ ಮೇಲೆ ತಣ್ಣಗಾಗಬಹುದು. ಆದರೆ ಅದನ್ನು ಬಾಯಿಗೆ ಹಾಕಿ ಕೊಂಡು ಅಗಿದಾಗ ಒಳಗೆ ಇನ್ನೂ ಬಿಸಿ ಇರುವುದು ಅನುಭವ ವಾಗುವುದು. ಇದರಂತೆಯೇ ಒಳಗೆ ಬಚ್ಚಿಟ್ಟುಕೊಂಡಿರುವ ವಿಷಯ ಸುಖದ ಆಸೆಯನ್ನು ಆರಿಸಬೇಕು. ಅನಂತರವೇ ಮನಸ್ಸನ್ನು ಸಮಾಧಾನ ಸ್ಥಿತಿಯಲ್ಲಿಟ್ಟಿರಬೇಕು. ಯಾವ ಉದ್ವಿಗ್ನತೆಗೂ ಒಳಗಾಗಕೂಡದು. ಆಗ ಮಾತ್ರ ಗಹನವಾದ ವಿಷಯಗಳನ್ನು ಕುರಿತು ಯೋಚಿಸುವುದು ಸಾಧ್ಯ. ಕೊನೆಯದೆ ಶ್ರದ್ಧೆ. ಗುರುವಾಕ್ಯದಲ್ಲಿ, ಆಧ್ಯಾತ್ಮಿಕ ವಿಷಯಗಳನ್ನು ಬೋಧಿಸುವ ಶಾಸ್ತ್ರಗಳಲ್ಲಿ ಶ್ರದ್ಧೆ ಇರಬೇಕು. ಇದೆಲ್ಲಾ ಬರೀ ಕಲ್ಪನೆ, ನಿಷ್ಪ್ರಯೋಜನ ಎಂದು ಹೊರಟರೆ ಆ ಹಾದಿಯಲ್ಲಿ ನಾವು ಮುಂದುವರಿಯಲಾರೆವು. ಅನೇಕ ಮೇಧಾವಿಗಳು, ಪ್ರಪಂಚದ ಪ್ರಲೋಭನೆಯ ಬಲೆಗೆ ಬೀಳದ ಪ್ರಚಂಡ ವ್ಯಕ್ತಿ ಗಳು, ಸತ್ಯವನ್ನು ಸಾಕ್ಷಾತ್ಕರಿಸಿಕೊಂಡ ಮಹಾಮಹಿಮರ ನುಡಿ ಇವು ಎಂದು ನಂಬಿ ನಮ್ಮ ಜೀವನದಲ್ಲೇ ಪ್ರಯೋಗ ಮಾಡಲು ಸಿದ್ಧವಾಗಿರಬೇಕು. ಪ್ರಯೋಗಮಾಡಿ ನಿಷ್ಪ್ರಯೋ ಜನ ಎಂದು ಕಂಡಾದಮೇಲೆ ಬೇಕಾದರೆ ಅಲ್ಲಗಳೆಯೋಣ. ಆದರೆ ಮುಂಚೆಯೇ ಅಲ್ಲಗಳೆಯಲು ಯತ್ನಿಸಿದರೆ ನಾವು

ಮುಂದುವರಿಯುವಂತೆಯೇ ಇಲ್ಲ. ವಿಜ್ಞಾನಶಾಸ್ತ್ರವನ್ನು ಕಲಿಯುವವನು ಪಠ್ಯ ಪುಸ್ತಕದಲ್ಲಿ ಹೇಳಿರುವ ಪ್ರಯೋಗ ಗಳನ್ನು ಹೇಗೆ ಒಪ್ಪಿಕೊಂಡು ಮುಂದುವರಿಯುವನೋ ಹಾಗೆ ಈ ಮಾರ್ಗದಲ್ಲಿಯೂ ಅಂತಹ ಶ್ರದ್ಧೆಯಿಂದ ಹೊರಡಬೇಕು.

ಅನಂತರವೇ ಜ್ಞಾನ ಮಾರ್ಗದಲ್ಲಿ ಮೂರು ಘಟ್ಟಗಳಿವೆ ಎನ್ನುವರು. ಮೊದಲು ಶ್ರವಣ ಅನಂತರ ಮನನ, ಅನಂತರ ನಿದಿಧ್ಯಾಸನ. ಮೊದಲು ಪರಾತ್ಪರ ವಸ್ತುವಿಗೆ ಸಂಬಂಧಪಟ್ಟ ವಿಷಯಗಳನ್ನು ಬಲ್ಲವರಿಂದ ಕೇಳಬೇಕು. ಸುಮ್ಮನೇ ನಾವೇ ಓದಿಕೊಳ್ಳುವುದಕ್ಕಿಂತ ಯಾರು ಈ ವಿಷಯಗಳನ್ನು ಚೆನ್ನಾಗಿ ತಿಳಿದಿರುವರೋ, ಜೀವನದಲ್ಲಿ ಅನುಷ್ಠಾನ ಮಾಡುತ್ತಿರುವರೋ, ಅವರಿಂದ ಕೇಳಿದಾಗ ವಿಷಯ ಚೆನ್ನಾಗಿ ನಮಗೆ ಅರ್ಥವಾಗು ವುದು. ನೂರೆಂಟುಸಲ ನಮಗೆ ನಾವೇ ಓದಿಕೊಳ್ಳುವುದ ಕ್ಕಿಂತಲೂ ಬಲ್ಲವರಿಂದ ನಾವು ಒಮ್ಮೆ ಕೇಳಿದರೆ ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲೆವು. ಸುಮ್ಮನೆ ಮನಸ್ಸಿಟ್ಟು ಕೇಳಿದರೆ ಸಾಲದು. ಅದನ್ನೇ ಮನನ ಮಾಡುತ್ತಿರಬೇಕು. ಆಲೋ ಚನೆ ಮಾಡುತ್ತಿರಬೇಕು. ಅದು ಹೇಗೆ ಎಂದು ನಮಗೆ ನಾವೇ ಪ್ರಶ್ನೆ ಹಾಕಿಕೊಳ್ಳುತ್ತಾ ಉತ್ತರವನ್ನು ಹುಡುಕುತ್ತಿರ ಬೇಕು. ಚೆನ್ನಾಗಿ ಮನನ ಮಾಡಿದ ಮೇಲೆಯೇ ವಿಷಯ ಚೆನ್ನಾಗಿ ನಮಗೆ ಗೊತ್ತಾಗುವುದು. ಕೇಳುವುದು ಆಹಾರ ವನ್ನು ತಿಂದಂತೆ. ಆದರೆ ಮನನಮಾಡುವುದು ಅದನ್ನು ಅರಗಿಸಿಕೊಂಡಂತೆ. ಆಗಲೇ ತಿಂದದ್ದು ರಕ್ತಗತವಾಗ ಬೇಕಾದರೆ. ಕೊನೆಯ ಮೆಟ್ಟಲೇ ನಿದಿಧ್ಯಾಸನ. ತಟಕ್ಕನೆ ಆ ಪರಮ ಸತ್ಯದ ಮೇಲೆ ಮನಸ್ಸು ನೆಲಸುವುದು. ಆಗಲೇ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಅನುಭವವಾಗುವುದು.

ಈ ಮಾರ್ಗವೇ ಜ್ಞಾನಯೋಗ. ಈ ಮಾರ್ಗದಲ್ಲಿ ಹೋಗುವವರ ಸಂಖ್ಯೆ ಬಹಳ ಅಪರೂಪ. ಇದು ತುಂಬಾ ಕಠಿಣವಾದ ಮಾರ್ಗ. ಆದರೂ ಜೀವನದಲ್ಲಿ ಅಪರೂಪವಾಗಿ ಇಂತಹ ವ್ಯಕ್ತಿಗಳೂ ಇರುವರು. ಅವರನ್ನು ಹಿಂದೂಧರ್ಮ ಅಲ್ಲಗಳೆಯದೆ ಅವರಿಗೇ ಪ್ರತ್ಯೇಕ ಒಂದು ಮಾರ್ಗವನ್ನು ಮಾಡಿ ಹೋಗಬಯಸುವ ಕಲಿಗಳನ್ನು ಆಶೀರ್ವದಿಸಿ ಕಳು ಹಿಸುವುದು. ಯಾರ ಸ್ಫೂರ್ತಿಗೂ ಧಕ್ಕೆ ತರುವುದಿಲ್ಲ. ಯಾರ ವಿಚಾರಶಕ್ತಿಯನ್ನೂ ಕುಂಠಿತ ಮಾಡಲೆತ್ನಿಸುವುದಿಲ್ಲ.

## ಕರ್ಮಯೋಗ.

ನಾವು ಮಾಡುವ ಕರ್ಮದ ಮೂಲಕವೇ ದೇವರನ್ನು ಸೇರ ಬಹುದು ಎನ್ನುವುದು ಕರ್ಮಯೋಗ. ಕೆಲವು ಕರ್ಮಪಟು ಗಳು ಇರುವರು. ಅವರಿಗೆ ವಿಚಾರಭಾವ ಭಕ್ತಿ ಹಿಡಿಸುವುದಿಲ್ಲ. ಏನೂ ಕೆಲಸಮಾಡದೆ ಸುಮ್ಮನೆ ಇರಿ ಎಂದು ಅವರಿಗೆ ಹೇಳಿದರೆ ಅವರು ಹುಚ್ಚರಾಗಿ ಹೋಗುವರು. ಇಂತಹ ಜನ ಸಮಾಜದಲ್ಲಿ ಬಹುಪಾಲು ಮಂದಿ ಇರುವರು. ಇಂತಹ ವರಿಗೂ ಹಿಡಿಸುವಂತಹ ಒಂದು ಮಾರ್ಗವನ್ನು ಹಿಂದೂ ಧರ್ಮ ಕಂಡು ಹಿಡಿದಿದೆ. ನೀವು ಮಾಡುವ ಕರ್ಮವನ್ನೇನೂ ಬಿಡಬೇಕಾಗಿಲ್ಲ. ಆ ಕರ್ಮವನ್ನು ಕರ್ಮಯೋಗವನ್ನಾಗಿ ಪರಿವರ್ತನಗೊಳಿಸಿ ಎನ್ನುವರು. ನಾವೆಲ್ಲಾ ಕರ್ಮವನ್ನೇನೋ ಬೆಳಗಿನಿಂದ ಸಾಯಂಕಾಲದವರೆಗೆ ಮಾಡುತ್ತಿರುವೆವು. ಆಫೀಸಿ ನಲ್ಲಿ, ಸ್ಕೂಲಿನಲ್ಲಿ, ಫ್ಯಾಕ್ಟರಿಯಲ್ಲಿ, ಹೊಲಗದ್ದೆಗಳಲ್ಲಿ ಹಲವರು ಹಲವು ಕಡೆ ಕೆಲಸ ಮಾಡುತ್ತಿರುವರು. ಆದರೆ ಈ ಕರ್ಮ ಮಾಡಿ ಆದಮೇಲೆ ನಮಗೆ ಶಾಂತಿ ಇಲ್ಲ, ಸಮಾಧಾನವಿಲ್ಲ.

ಇದಕ್ಕೆ ಕಾರಣ ಕರ್ಮ ಕರ್ಮಯೋಗ ಆಗದಿರುವುದು. ಈ ಯೋಗ ಹೇಗೆ ಕರ್ಮವನ್ನು ಕರ್ಮಯೋಗ ಮಾಡಬಹುದು ಎಂಬುದನ್ನು ತೋರುವುದು. ಕುರುಕ್ಷೇತ್ರದ ಯುದ್ಧದಲ್ಲಿ ಶ್ರೀಕೃಷ್ಣ ಅರ್ಜುನನಿಗೆ ಬೋಧಿಸಿದ್ದೇ ಇದನ್ನು. ಕರ್ಮ ಅಲ್ಲ ನಮ್ಮನ್ನು ಬಂಧಿಸುವುದು, ಕರ್ಮದ ಮೇಲೆ ಇರುವ ಆಸಕ್ತಿ. ಆದಕಾರಣವೇ ಕರ್ಮ ಮಾಡಿ ಆದರೆ ಫಲಕ್ಕೆ ದಾಸರಾಗ ಬೇಡಿ. ಇದನ್ನೇ "ಯೋಗಃ ಕರ್ಮಸು ಕೌಶಲಂ" ಎಂದು ಶ್ರೀಕೃಷ್ಣ ಸಾರುವುದು. ಕರ್ಮ ಮಾಡುವುದಕ್ಕೆ ಮಾತ್ರ ನಮಗೆ ಅಧಿಕಾರ, ಅದರ ಫಲಕ್ಕಲ್ಲ. ಯಾವಾಗ ಫಲಕ್ಕೆ ಕೈಯೊಡ್ಡುವೆವೋ ಆಗ ನಾವು ಮಾಡಿದ್ದು ಸತ್ಕಾರ್ಯವೇ ಆಗಿರಬಹುದು, ಆದರೂ ಅಶಾಂತಿ ದುಃಖ ನಮ್ಮನ್ನು ಬಾಧಿಸು ವುದು. ನಾವು ಇಚ್ಛೆ ಪಡದೇ ಇದ್ದರೂ ಕರ್ಮಫಲ ಬರುವುದು, ಅದನ್ನು ಏನು ಮಾಡುವುದು ಎಂದು ಪ್ರಶ್ನಿಸಬಹುದು. ಅದಕ್ಕೆ ಶ್ರೀ ಕೃಷ್ಣ ಸಮರ್ಪಕವಾದ ಉತ್ತರವನ್ನು ಕೊಡುವನು ಹಾಗೆ ಫಲ ಬಂದರೆ ಅದನ್ನು ಭಗವಂತನಿಗೆ ಅರ್ಪಣಮಾಡಿ ಎನ್ನುವನು.

ಕರ್ಮವನ್ನು ಒಂದು ಯಜ್ಞದಂತೆ ಮಾಡಿ. ಯಜ್ಞಕ್ಕೆ ಮಾಡಿದ ಕರ್ಮ ಮಾತ್ರ ನಮ್ಮನ್ನು ಬಂಧಿಸುವುದಿಲ್ಲ. ಉಳಿದ ಕರ್ಮವೆಲ್ಲಾ ನಮ್ಮನ್ನು ಬಂಧಿಸುವುದು. ಎಲ್ಲಾ ಕರ್ಮ ವನ್ನೂ ಯಜ್ಞರೂಪಕ್ಕೆ ಪರಿವರ್ತನೆಗೊಳಿಸಬಹುದು. ಈ ಪ್ರಪಂಚ ನಿಂತಿರುವುದೇ ಯಜ್ಞದ ಆಧಾರದ ಮೇಲೆ. ಆ ಯಜ್ಞಕ್ಕೆ ಪ್ರತಿಯೊಬ್ಬರೂ ತಮ್ಮಲ್ಲಿ ಏನು ಇದೆಯೋ ಅದನ್ನು ನಿವೇದಿಸಬೇಕು. ಬುದ್ಧಿ ಇರುವವರು ಬುದ್ಧಿ ಕೊಡಲಿ, ಶ್ರಮ ಮಾಡುವವರು ಶ್ರಮ ಮಾಡಲಿ, ಪ್ರೀತಿ ಇರುವವರು ಪ್ರೀತಿ

ಕೊಡಲಿ, ಇನ್ನು ಯಾವ ವಿಧವಾದ ಅಭಿರುಚಿ ಶಕ್ತಿ ನಮ್ಮಲ್ಲಿರುವುದೋ ಅದನ್ನೆಲ್ಲಾ ವಿರಾಟ್‌ಯಜ್ಞಕ್ಕೆ ನಿವೇದಿಸಿ ಎನ್ನುವನು ಶ್ರೀಕೃಷ್ಣ. ದ್ರವ್ಯಯಜ್ಞ, ತಪೋಯಜ್ಞ, ಜ್ಞಾನಯಜ್ಞ, ಸ್ವಾಧ್ಯಾಯಯಜ್ಞವೆಂಬ ಹಲವು ಬಗೆಯ ಯಜ್ಞಗಳಿವೆ. ಆ ಯಜ್ಞ ದೃಷ್ಟಿಯಿಂದ ಪ್ರತಿಯೊಬ್ಬನೂ ತನ್ನ ಪಾಲಿನ ಕರ್ತವ್ಯವನ್ನು ನೆರವೇರಿಸಲಿ. ಆಗ ಮಾತ್ರ ಅವನ ಪಾಲಿಗೆ ಶಾಂತಿ. ಯಾವ ಮನುಷ್ಯ ಯಜ್ಞವನ್ನು ಮಾಡುವುದಿಲ್ಲವೋ ಅವನಿಗೆ ಇಹಲೋಕವೇ ಇಲ್ಲ. ಇನ್ನು ಪರಲೋಕದ ಮಾತೆಲ್ಲಿ ಎನ್ನುವನು ಶ್ರೀ ಕೃಷ್ಣ.

ಯಾವುದು ಯಜ್ಞಮಾಡಿದಮೇಲೆ ಉಳಿಯುವುದೋ ಅದೇ ಅಮೃತ. ಯಾರು ಆ ಅಮೃತವನ್ನು ಭುಂಜಿಸುವರೋ ಅವರು ಅಮೃತ ಪುತ್ರರಾಗುವರು. ಎಂಧರೆ ಪುನಃ ಜನನ ಮರಣದ ಚಕ್ರಕ್ಕೆ ಸಿಕ್ಕುವುದಿಲ್ಲ. ತನ್ನಲ್ಲಿ ಏನಿದೆಯೋ ಅದನ್ನು ಸಮಷ್ಟಿರೂಪನಾದ ಭಗವಂತನಿಗೆ ನಿವೇದಿಸಿ ಆದ ಮೇಲೆ ಉಳಿಯುವುದೇನಿದೆಯೋ ಅದೇ ನನ್ನದು. ಜ್ಞಾನ ಸಂಪಾದಿಸುವುದು ಕೊಡುವುದಕ್ಕೆ. ಕೊಟ್ಟಾದ ಮೇಲೆ ಉಳಿಯುವುದು ನನ್ನದು. ಅಧಿಕಾರ ಭಗವಂತನ ಮಕ್ಕಳ ಸೇವೆಗೆ. ಅವರಿಗೆ ಸೇವೆ ಮಾಡಿದ ಮೇಲೆ ಉಳಿಯುವುದು ನನ್ನದು. ಮೊದಲು ದೇವರು ಅವನ ಮಕ್ಕಳನ್ನು ತಂದು ಕೊನೆಗೆ ನಿನ್ನನ್ನು ತೆಗೆದುಕೊಂಡು ಬಾ ಎನ್ನುವುದು ಯಜ್ಞ. ನಾವು ಅಜ್ಞಾನದಲ್ಲಿರುವಾಗ ನಮ್ಮನ್ನು ಮೊದಲು ಮೆರಸುವೆವು. ಅದಕ್ಕಾಗಿ ಹಣ, ಅದಕ್ಕಾಗಿ ಕೀರ್ತಿ, ಅಧಿಕಾರವೆಲ್ಲಾ. ಆದರೆ ಯಾವಾಗ ಯಜ್ಞಭಾವನೆ ಬರುವುದೋ ಆಗ ಮೊದಲು ದೇವರು. ಅವನಿಗೆ ನನ್ನ ಕರ್ಮದ ಮೂಲಕ ಪೂಜೆಮಾಡ

ಬೇಕು. ಪ್ರಜೆಗಳೆಲ್ಲಾ ಭಗವಂತನ ಮಕ್ಕಳು, ಅವನ ಮಕ್ಕಳ ಪೂಜೆ ಅವನಿಗೆ ಪರಮಪ್ರಿಯವಾದಪೂಜೆ. ಯಾರು ಆ ಪೂಜೆಯನ್ನು ಮಾಡುತ್ತಾರೆಯೋ ಭಗವಂತ ಅಂತಹವರನ್ನು ಒಲಿಯುತ್ತಾನೆ. ಅವರು ಇಚ್ಛಿಸಲಿ, ಬಿಡಲಿ, ಅವರ ಚಿತ್ತವನ್ನು ಶುದ್ಧಿಮಾಡುವನು. ಅಲ್ಲಿ ಪರಂಜ್ಯೋತಿ ದರ್ಶನ ಕರ್ಮಯೋಗಿಗೆ ಆಗುವುದು.

ನಾವು ಏನು ಕರ್ಮ ಮಾಡಿದರೂ ದೇವರಿಗೆ ನಿವೇದಿಸಬಹುದು. ಅವನಿಗೇನು ಅದೇ ಬೇಕು ಇದೇ ಬೇಕು ಎಂದಿಲ್ಲ. ಅದಕ್ಕಾಗಿಯೇ ಶ್ರೀಕೃಷ್ಣ ಅರ್ಜುನನಿಗೆ ಈ ಶ್ಲೋಕವನ್ನು ಹೇಳುವನು; "ಅರ್ಜುನ ಯಾವುದನ್ನು ಮಾಡುತ್ತೀಯೋ, ಯಾವುದನ್ನು ಭುಂಜಿಸುತ್ತಿಯೋ, ಯಾವುದನ್ನು ಹೋಮ ಮಾಡುತ್ತೀಯೋ ಯಾವುದನ್ನು ದಾನಮಾಡುತ್ತೀಯೋ, ಯಾವ ತಪಸ್ಸನ್ನು ಮಾಡುತ್ತೀಯೋ, ಅವೆಲ್ಲವನ್ನು ನನಗೆ ಅರ್ಪಿಸು. ಹೀಗೆ ಶುಭ ಅಶುಭ ಫಲಗಳ ಕರ್ಮಬಂಧನದಿಂದ ಬಿಡುಗಡೆ ಯಾಗುವೆ".

## ಭಕ್ತಿಯೋಗ

ಕರ್ಮವನ್ನು ಹೇಗೆ ಕರ್ಮಯೋಗ ಮಾಡಬಹುದೆಂಬುದನ್ನು ಹಿಂದೆ ನೋಡಿದೆವು. ಹಾಗೆಯೇ ಪ್ರೀತಿಯನ್ನು ಹೇಗೆ ಪ್ರೀತಿ ಅಥವಾ ಭಕ್ತಿಯೋಗವನ್ನು ಮಾಡಬಹುದೆಂಬುದನ್ನು ಭಕ್ತಿಯೋಗ ವಿವರಿಸುವುದು. ನಾವೆಲ್ಲರೂ ಪ್ರೀತಿಸುತ್ತಿರುವೆವು. ಆದರೆ ಆ ಪ್ರೀತಿಯಿಂದ ನಮಗೆ ಸಂತೋಷ ತೃಪ್ತಿ ಸಿಕ್ಕುವುದು ಅಪರೂಪ. ಏಕೆಂದರೆ ನಾವೆಲ್ಲಾ ಅಲ್ಪವಸ್ತುಗಳನ್ನು ಪ್ರೀತಿಸುತ್ತಿರುವೆವು. ಎಲ್ಲಿ ಅಲ್ಪವಸ್ತುಗಳನ್ನು ಪ್ರೀತಿಸು

ತ್ತಿರುವೆವೋ ಅಲ್ಲಿ ದುಃಖ ನಮಗೆ ತಪ್ಪಿದ್ದಲ್ಲ. ಅದಕ್ಕೇ ಉಪನಿಷತ್ "ನ ಅಲ್ಪೇ ಸುಖಮಸ್ತೀ" ಎಂದು ಸಾರುವುದು. "ಭೂಮೈವ ಸುಖಂ" ಭೂಮ ಒಂದೇ ನಮಗೆ ಸುಖವನ್ನು ಕೊಡಬಲ್ಲದು. ಆ ಭೂಮವಸ್ತು ಭಗವಂತನೊಬ್ಬನೇ. ಹಾಗಾದರೆ ನಾವು ದೇವರನ್ನು ಪ್ರೀತಿಸಬೇಕಾದರೆ ಇತರ ವಸ್ತುಗಳನ್ನು ಅಸಡ್ಡೆಯಿಂದ ನೋಡಬೇಕೆ? ಇಲ್ಲ, ನಾವು ಹಿಂದೆ ಯಾವ ಯಾವ ವಸ್ತುವನ್ನು ಪ್ರೀತಿಸುತ್ತಿದ್ದೆವೋ ಅದನ್ನೆಲ್ಲಾ ಆಯಾ ವಸ್ತುವಿನ ದೃಷ್ಟಿಯಿಂದ ಪ್ರೀತಿಸದೆ ದೇವರಿಗಾಗಿ ಇವೆಲ್ಲಾ ಅವನದು ಎಂದು ತಿಳಿದುಕೊಂಡು ಪ್ರೀತಿಸಿ. ನಮ್ಮ ದೇಶಪ್ರೀತಿ, ಗಂಡಹೆಂಡಿರಪ್ರೀತಿ, ಮಕ್ಕಳು ಸ್ನೇಹಿತರಪ್ರೀತಿ ದೇವರಿಗಾಗಿ ಇರಬೇಕು. ದೇವರನ್ನು ಮರೆಸುವ ಪ್ರೀತಿಯಾಗ ಕೂಡದು. ಎಂದು ದೇವರನ್ನು ಮರೆಯುವೆವೋ ಆಗ ಪ್ರೀತಿಸುವ ವಸ್ತು ಚೇಳಿನಂತೆ ಕುಟಿಕಿದಾಗ ಅದನ್ನು ಸಹಿಸಲು ಅಸದಳವಾಗುವುದು. ಈ ಮಾರ್ಗದಲ್ಲಿ ಪ್ರೀತಿಯ ನಾವೆಯ ಮೂಲಕ ತೇಲಿ ಭಗವಂತನೆಂಬ ಸಚ್ಚಿದಾನಂದ ಸಾಗರವನ್ನು ಸೇರಬಹುದು.

ಭಕ್ತಿಹಾದಿ ಎಲ್ಲಾ ಹಾದಿಗಳಿಗಿಂತಲೂ ಸುಲಭವಾದರೂ ನಾವು ದೇವರೆಡೆಗೆ ಯಾವ ಮಾರ್ಗದ ಮೂಲಕ ಹೋಗ ಬೇಕಾದರೂ ಸ್ವಲ್ಪ ಕಷ್ಟಪಡಲೇ ಬೇಕು. ಸ್ವಲ್ಪ ಅಣಿ ಯಾಗಲೇಬೇಕು. ಪ್ರಪಂಚದಲ್ಲಿ ಎಲ್ಲದಕ್ಕೂ ಮನುಷ್ಯ ತಯಾರಿ ತೆಗೆದುಕೊಳ್ಳಬೇಕು. ಜೀವನೋಪಾಯಕ್ಕೆ ಓದ ಬೇಕು, ಯಾವುದಾದರೂ ಕೆಲಸ ಕಲಿಯಬೇಕು. ಒಪ್ಪತ್ತು ಕೂಳು ಸಂಪಾದಿಸಬೇಕಾದರೆ ಮನುಷ್ಯ ಎಷ್ಟೊಂದು ಅಣಿ ಯಾಗುವನು. ಹಾಗಿದ್ದರೆ ಭಗವಂತನನ್ನು ಪಡೆಯಲು ಅಷ್ಟೂ

ಅಣಿಯಾಗದಿದ್ದರೆ ಹೇಗೆ? ಅದಕ್ಕಾಗಿಯೇ ಭಕ್ತಿಮಾರ್ಗದಲ್ಲಿ ನಾವು ಯಶಸ್ವಿಯಾಗಿ ಮುಂದುವರಿದು ಗುರಿ ಸೇರಬೇಕಾದರೆ ಯಾತ್ರಿಕ ಕೆಳಗೆ ಬರುವ ಕೆಲವು ಗುಣಗಳನ್ನು ರೂಢಿಸಿಕೊಳ್ಳ ಬೇಕೆಂದು ಭಕ್ತಿಶಾಸ್ತ್ರಗಳು ಸಾರುವುವು.

ಮೊವಲನೆಯದೆ ವಿವೇಕ. ಮನುಷ್ಯ ಬುದ್ಧಿವಂತನಾಗಿರ ಬೇಕು. ಸಾಚಾ ಯಾವುದು, ಖೋಟಾ ಯಾವುದು, ಸರಿ ಯಾವುದು, ತಪ್ಪುಯಾವುದು, ದೇವರೆಡೆಗೆ ಯಾವುದು ನಮ್ಮನ್ನು ಒಯ್ಯುವುದು, ಅವನಿಗೆ ವಿಮುಖವಾಗಿ ಯಾವುದು ನಮ್ಮನ್ನು ಒಯ್ಯುವುದು ಎಂಬುದನ್ನು ತಿಳಿದುಕೊಂಡಿರಬೇಕು. ಭಕ್ತಿ ಮಾರ್ಗದಲ್ಲಿ ಒಂದು ಸಾಚಾವಸ್ತುವಿದ್ದರೆ ಹಲವು ಖೋಟಾ ವಸ್ತುಗಳಿರುತ್ತವೆ. ಇಲ್ಲಿ ಅನುಕರಿಸುವುದು ಬಹಳ ಸುಲಭ. ಆದಕಾರಣವೇ ಹಳ್ಳಕ್ಕೆ ಬೀಳದಂತೆ, ಸಿಕ್ಕಿದವರ ಪ್ರಭಾವಕ್ಕೆ ಬೀಳದಂತೆ ಇರಬೇಕಾದರೆ ವಿವೇಕ ಅತ್ಯಾವಶ್ಯಕ.

ವಿವೇಕ ಎಂದರೆ ಪ್ರಾಪಂಚಿಕ ಆಸೆಯ ವಿಸರ್ಜನೆ. ನಮಗೆ ದೇವರು ಬೇಕಾದರೆ ಪ್ರಪಂಚದ ಮೇಲೆ, ಅಲ್ಲಿಯ ವ್ಯಕ್ತಿ ಮತ್ತು ವಸ್ತುಗಳ ಮೇಲೆ ಆಸೆಯನ್ನು ತ್ಯಜಿಸಲು ಸಿದ್ಧವಾಗಿರಬೇಕು. ಎರಡನ್ನೂ ಜೊತೆಜೊತೆಯಲ್ಲೇ ತೆಗೆದುಕೊಂಡು ಹೋಗಲು ಸಾಧ್ಯವಿಲ್ಲ. ಒಂದು ಬೇಕಾದರೆ ಮತ್ತೊಂದನ್ನು ತೆರಲು ನಾವು ಸಿದ್ಧರಾಗಿರಬೇಕು. ಹೀಗೆ ದೇವರಿಗೆ ಎಲ್ಲಾ ಆಸೆ ಗಳನ್ನು ಬಲಿಕೊಡಲು ಯಾರು ಸಿದ್ಧರಾಗಿಲ್ಲವೋ ಅವರು ಸ್ವಲ್ಪದೂರ ಮಾತ್ರ ಹೋಗಿ ನಿಂತುಕೊಳ್ಳುವರು. ದೇವರನ್ನು ಬಲಿಪ್ರಿಯ ಎಂದು ಕೊಂಡಾಡುವೆವು. ಇಲ್ಲಿ ಬಲಿ ಎಂದರೆ ತೆಂಗಿನಕಾಯಿ, ಕುರಿ ಕೋಳಿ ಮುಂತಾದುವುಗಳ ಬಲಿಯಲ್ಲ. ಯಾವುದು ನನಗೆ ಪ್ರಿಯವಾಗಿರುವುದೋ ಅದನ್ನು ದೇವರಿ

ಗಾಗಿ ತೆರಲು ಸಿದ್ಧನಾಗಿರಬೇಕು. ರಾಮ ಕಾಮ ಎರಡೂ ಒಟ್ಟಿಗೇ ಹೋಗಲಾರದು. ರಾಮ ಬೇಕಾದರೆ ಕಾಮ ತ್ಯಜಿಸಲು ಸಿದ್ಧನಾಗಿರಬೇಕು. ಕಾಮಕ್ಕೆ ಅಂಟಿಕೊಂಡಿದ್ದರೆ ದೇವರು ದೂರದಲ್ಲಿಯೇ ನಿಲ್ಲುವನು. ಯಾವುದರಲ್ಲಿ ನಿನಗೆ ಪ್ರೇಮವೋ ಅದರಲ್ಲೇ ಸುಖಿಸು ಎಂದು ದೇವರು ಹೇಳುವನು. ಆದರೆ ದೇವರೇ ನನಗೆ ಬೇಕಾದರೆ ಎಲ್ಲವನ್ನೂ ಅವನಿಗೆ ಬಲಿ ಕೊಟ್ಟಲ್ಲದೆ ಅವನು ಒಲಿಯುವುದಿಲ್ಲ.

ಅನಂತರವೇ ಅಭ್ಯಾಸ. ಭಗವಂತನನ್ನು ಸದಾ ಮನದಲ್ಲಿ ಚಿಂತಿಸಲು ಅಭ್ಯಾಸಮಾಡಬೇಕು. ಶ್ರೀ ಕೃಷ್ಣ ಗೀತೆಯಲ್ಲಿ ಇದನ್ನೇ ಅಭ್ಯಾಸಯೋಗ ಎನ್ನುವನು. ಎಲ್ಲರಿಗೂ ಭಗವಂತನ ಮೇಲೆ ಮೊದಲೇ ಅವಿಚ್ಛಿನ್ನವಾದ ಪ್ರೀತಿ ಹುಟ್ಟುವುದಿಲ್ಲ. ನಮ್ಮಲ್ಲಿರುವ ಪ್ರೀತಿ ಖಂಡಖಂಡವಾಗಿ ಛಿದ್ರಛಿದ್ರವಾಗಿರುವುದು. ಕೆಲವುವೇಳೆ ಅವನನ್ನು ಚಿಂತಿಸುತ್ತೇವೆ, ಕೆಲವುವೇಳೆ ಅವನನ್ನು ಮರೆಯುತ್ತೇವೆ. ಅದನ್ನೆಲ್ಲಾ ಒಟ್ಟು ಸೇರಿಸಬೇಕು. ಪದೇ ಪದೇ ಅದಕ್ಕಾಗಿ ಅಭ್ಯಾಸಮಾಡುತ್ತಿರಬೇಕು. ಎಷ್ಟುಸಲ ಮರೆತರೂ ನಿಷ್ಫಲವಾದರೂ ಭಂಡರಾಗಿ ನಾವು ಪುನಃ ಪುನಃ ಸಾಧನೆಯಲ್ಲಿ ನಿರತರಾದರೆ ಕ್ರಮೇಣ ಅಭ್ಯಾಸಬಲದಿಂದ ಭಗವಂತನ ಸ್ಮೃತಿ ನಮ್ಮ ಮನಸ್ಸಿನಲ್ಲಿ, ಎಣ್ಣೆಯನ್ನು ಒಂದು ಪಾತ್ರೆಯಿಂದ ಮತ್ತೊಂದು ಪಾತ್ರೆಗೆ ಹಾಕಿದರೆ ಹೇಗೆ ಒಂದೇ ಸಮನಾಗಿ ಅಖಂಡವಾಗಿ ಬೀಳುವುದೋ ಹಾಗೆ ಆಗುವುದು. ನಮ್ಮಲ್ಲೆಲ್ಲಾ ಆ ಭಂಡತನ ಇದೆ. ಅದೇನೂ ಹೊಸದಲ್ಲ. ಪುರಾಣದಲ್ಲಿ ಓದುವ ಭಂಡಾಸುರನ ಪುನರಾವತಾರ ನಾವೆಲ್ಲಾ. ಎಷ್ಟು ವೇಳೆ ಪ್ರೀತಿಸುವ ವಸ್ತುವಿನಿಂದ ಅವಮಾನಪಡುವೆವು; ಆದರೂ ಅದರ ಹತ್ತಿರ ಹೋಗು

ವೆವು. ಎಷ್ಟು ಬೈಯಿಸಿಕೊಳ್ಳುವೆವು, ಎಷ್ಟುವೇಳೆ ವ್ಯಥೆಪಡು ವೆವು, ಪ್ರಾಪಂಚಿಕ ವಸ್ತುಗಳಿಗಾಗಿ. ಆದರೂ ಅವನ್ನು ಪಡೆಯಬೇಕೆಂಬ ಆಸೆ ನಮ್ಮಿಂದ ಹೋಗುವುದಿಲ್ಲ. ನಾಚಿಕೆ ಹೇಸಿಗೆ ಎಲ್ಲಾ ತೊರೆದು ಭಂಡರಾಗಿ ಪ್ರಾಪಂಚಿಕ ವಸ್ತುಗಳ ಹಿಂದೆ ನುಗ್ಗುತ್ತಿದ್ದೆವು. ಈಗ ನುಗ್ಗುತ್ತಿರುವೆವು. ಭಕ್ತನಾದ ವನು ಆ ಭಂಡತನವನ್ನು ದೇವರೆಡೆಗೆ ತಿರುಗಿಸಿ ಧನ್ಯರಾಗಿ ಎನ್ನುವನು.

ಅನಂತರವೇ ಕ್ರಿಯೆ; ಒಳ್ಳೆಯ ಕೆಲಸವನ್ನು ಮಾಡುತ್ತಿರ ಬೇಕು. ಆಗ ಮಾತ್ರ ನಮ್ಮ ಮನಸ್ಸು ಶುದ್ಧವಾಗಬೇಕಾದರೆ, ಭಕ್ತಿ ಅಪ್ಪಟ ಆಗಬೇಕಾದರೆ. ಹಲವು ಬಗೆ ಕಾರ್ಯದಲ್ಲಿ ನಾವು ನಮ್ಮ ಮನಸ್ಸನ್ನು ನಿರತವಾಗುವಂತೆ ಮಾಡಬಹುದು. ಒಳ್ಳೆಯ ಮಾತುಕತೆ, ಇತರರಿಗೆ ವಿದ್ಯಾದಾನ, ಅನ್ನದಾನ ಅಥವಾ ಮತ್ತೆ ಯಾವುದಾದರೂ ಸೇವೆಯನ್ನು ಮಾಡುತ್ತಿರ ಬೇಕು. ಯಾವಾಗಲೂ ನೀಡುವುದು ನಮ್ಮ ಸ್ವಭಾವ ಆಗ ಬೇಕು. ಹಣವೇ ಎಲ್ಲರೂ ಕೊಡಬೇಕೆಂದು ಅಲ್ಲ. ನಮ್ಮಲ್ಲಿ ಏನಿದೆಯೋ ಅದನ್ನು ಪ್ರೇಮರೂಪದಲ್ಲಿ ಭಗವಂತನ ಮಕ್ಕಳಿಗೆ ಕೊಡಬೇಕು. ನಾವು ಎಷ್ಟು ಇತರರಿಗೆ ಫಲಾಪೇಕ್ಷೆ ಇಲ್ಲದೆ ನೀಡುವೆವೋ ನಮ್ಮ ಮನಸ್ಸು ಅಷ್ಟೂ ಪರಿಶುದ್ಧವಾಗುವುದು; ಅಷ್ಟೂ ವಿಶಾಲವಾಗುವುದು. ಅಂತಹ ಮನಸ್ಸಿನಿಂದ ಪ್ರಾರ್ಥನೆ ಜಪ ಪೂಜೆ ಧ್ಯಾನಗಳನ್ನು ಚೆನ್ನಾಗಿ ಮಾಡ ಬಹುದು. ಆದಕಾರಣವೇ ಭಕ್ತನಾದವನು ಇತರರ ಒಳ್ಳೆಯದ ಕ್ಕಾಗಿ ಮಾಡುವ ಕಾರ್ಯದಲ್ಲಿ ಭಾಗಿಯಾಗಬೇಕು.

ಅನಂತರವೇ ಕಲ್ಯಾಣ ಅಥವಾ ಹೃದಯವನ್ನು ಪರಿಶುದ್ಧ ವಾಗಿಟ್ಟಿರಲು ಯತ್ನಿಸಬೇಕು. ಹಾಗೆ ಇಡಬೇಕಾದರೆ ಸತ್ಯ

ಅಹಿಂಸೆ ಆರ್ಜವ ದಯೆ ದಾನ ಮುಂತಾದುವು ನಮ್ಮಲ್ಲಿರಬೇಕು. ಭಕ್ತನಲ್ಲಿ ಇರಬೇಕಾದ ಮತ್ತೊಂದು ಗುಣವೇ ಅನವಸಾದ, ಪೆಚ್ಚುಮೋರೆ ಇಲ್ಲದೆ ಇರುವುದು; ಮಂದಹಾಸದಿಂದ ಕೂಡಿರುವುದು. ಭಕ್ತರಲ್ಲಿ ನಗುಮುಖ ನೋಡುವೆವೇ ಹೊರತು ಅಳುಮೋರೆಯನ್ನಲ್ಲ. ನಾವೆಲ್ಲಾ ಸಚ್ಚಿದಾನಂದ ಸ್ವರೂಪಿ ಯಾದ ಭಗವಂತನ ಮಕ್ಕಳು. ಅಂತಹ ಭಕ್ತನಲ್ಲಿಯೇ ಮಂದಹಾಸ ಇಲ್ಲದೇ ಇದ್ದರೆ ಪ್ರಪಂಚದ ಆವಿಗೆಯಲ್ಲಿ ಸಿಕ್ಕಿ ಬೇಯುತ್ತಿರುವವನಲ್ಲಿ ಅದು ಸಿಕ್ಕುವುದೇ?

ಭಕ್ತಿಮಾರ್ಗವಲ್ಲಿ ಭಗವಂತನಿಗೆ ಯಾವುದಾದರೂ ಆಕಾರ ವನ್ನು ಕೊಟ್ಟು ಅದನ್ನು ಮಾನವ ಸಹಜವಾದ ಸಂಬಂಧ ದೊಂದಿಗೆ ಪ್ರೀತಿಸಬಹುದು. ಅವನನ್ನು ತಂದೆ ಎಂದು ಕರೆಯ ಬಹುದು, ತಾಯಿ ಎಂದು ಕರೆಯಬಹುದು. ನನ್ನ ಸ್ವಾಮಿ ಎಂದು ಕರೆಯಬಹುದು. ನನ್ನ ಮಗು ದೇವರು ಎಂದು ಭಾವಿಸಬಹುದು. ಅವನು ನನ್ನ ಪ್ರಿಯತಮ ಎಂತಲೂ ನೋಡಬಹುದು. ಅವನನ್ನು ಸಖನೆಂದೂ ನೋಡಬಹುದು. ಯಾವ ಆಕಾರವಾಗಲಿ, ಯಾವ ಸಂಬಂಧವಾಗಲಿ ಅವುಗಳ ಮೂಲಕ ದೇವರನ್ನು ಪ್ರೀತಿಸಬಹುದು.

ದೇವರಿಗೆ ಹೇಗೆ ನಾವು ನಾಮರೂಪಗಳನ್ನು ಆರೋಪ ಮಾಡುತ್ತೇವೆಯೋ ಹಾಗೆಯೇ ಅವನನ್ನು ಯಾವ ವಿಗ್ರಹದ ಮೂಲಕ ಬೇಕಾದರೂ ಪೂಜಿಸಬಹುದು. ಹಿಂದೂಧರ್ಮದಲ್ಲಿ ಬೇಕಾದಷ್ಟು ವಿಗ್ರಹಗಳಿವೆ. ಆದರೆ ಆ ವಿಗ್ರಹವೇ ದೇವರಲ್ಲ. ಆ ವಿಗ್ರಹದ ಮೂಲಕ ದೇವರನ್ನು ನೋಡುತ್ತಾನೆ ಹಿಂದೂ. ಯಾರಿಗೆ ಈ ರಹಸ್ಯ ಗೊತ್ತಿಲ್ಲವೋ ಅವರು ಈ ಹಿಂದೂಗಳು ಕಲ್ಲು ಮಣ್ಣು ವಿಗ್ರಹಗಳನ್ನು ದೇವರೆಂದು ಪೂಜಿಸುತ್ತಾರೆಂದು

ಹಾಸ್ಯಮಾಡುವರು. ಆದರೆ ಯಾವ ಹಿಂದೂವನ್ನೇ ಕೇಳಿ ಅವನಿಗೆ ದೇವರು ಸರ್ವಾಂತರ್ಯಾಮಿ ಎನ್ನುವುದು ಗೊತ್ತಿದೆ. ಆದರೂ ಅವನನ್ನು ನೆನಪಿಗೆ ತರಲು ಒಂದು ಚಿಹ್ನೆಬೇಕೆಂದು ವಿಗ್ರಹಾದಿಗಳನ್ನು ಉಪಯೋಗಿಸುವನು.

ದೇವರು ಸರ್ವಾಂತರ್ಯಾಮಿಯಾಗಿರುವಾಗ ವಿಗ್ರಹದಲ್ಲಿ ಏಕೆ ಇರಬಾರದು? ಅವನು ಎಲ್ಲಾ ಕಡೆಯೂ ಇದ್ದು ವಿಗ್ರಹದಲ್ಲಿ ಮಾತ್ರ ಗೈರ್‌ಹಾಜರ್ ಆಗಿರಬೇಕೆ? ಅವನು ಎಲ್ಲಾ ಕಡೆ ಎಷ್ಟು ಇರುವನೋ ಅಷ್ಟು ವಿಗ್ರಹದಲ್ಲಿಯೂ ಇರಬೇಕು. ಅದೊಂದೇ ಅಲ್ಲ, ವ್ಯಾವಹಾರಿಕ ಜಗತ್ತಿನ ದೃಷ್ಟಿಯಿಂದ ನೋಡಿದಾಗ ವಿಗ್ರಹದಲ್ಲಿ, ದೇವಸ್ಥಾನದಲ್ಲಿ, ಎಲ್ಲೆಲ್ಲಿ ಮನುಜ ಭಗವಂತನನ್ನು ಕರೆಯುವನೋ ಅಲ್ಲೆಲ್ಲಾ ಅವನು ಹೆಚ್ಚು ಆವಿರ್ಭವಿಸುವನು. ಸೂರ್ಯನಕಿರಣ ಎಲ್ಲಾ ಕಡೆಯಲ್ಲಿಯೂ ಬೀಳುತ್ತಿದ್ದರೂ ಕನ್ನಡಿ ಸೂರ್ಯನನ್ನು ಹೆಚ್ಚು ಪ್ರತಿಬಿಂಬಿಸು ವಂತೆ ವಿಗ್ರಹಾದಿಗಳು ಭಗವಂತನನ್ನು ಹೆಚ್ಚು ವ್ಯಕ್ತಗೊಳಿಸು ತ್ತವೆ.

ಹೇಗೆ ವಿಗ್ರಹಾದಿಗಳು ಇವೆಯೋ ಅದರಂತೆಯೇ ಬೇಕಾದಷ್ಟು ಆಚಾರಗಳನ್ನು ಪೂಜಾಕ್ರಮದಲ್ಲಿ ನೋಡುತ್ತೇವೆ. ದೇವರಿಗೆ ಭಕ್ತ ಬಗೆಬಗೆಯ ಅಲಂಕಾರಮಾಡುತ್ತಾನೆ. ಉತ್ಸವಮಾಡು ತ್ತಾನೆ, ಗಾಳಿಹಾಕುತ್ತಾನೆ, ಕಾಲು ಹಿಸುಕುತ್ತಾನೆ. ತಿನ್ನುವು ದಕ್ಕೆ ಉಣ್ಣುವುದಕ್ಕೆ ಮಾನವರಿಗೆ ಕೊಟ್ಟಂತೆ ಭಕ್ತ ಕೊಡು ತ್ತಾನೆ. ಇವಾವುದನ್ನು ಹಿಂದೂಗಳು ಅಲ್ಲಗಳೆಯುವುದಿಲ್ಲ. ಯಾರಿಗೆ ಇದು ಸಹಾಯವಾಗುವುದೋ ಅವರು ಇವನ್ನು ಮಾಡಿ ಕೊಳ್ಳಲಿ. ಯಾರಿಗೆ ಇದು ಹಿಡಿಸುವುದಿಲ್ಲವೋ ಅವರಿಗೆ ಇದನ್ನು ನಿಂದಿಸಲು ಅಧಿಕಾರವಿಲ್ಲ. ಅವರು ಬೇಕಾದರೆ ಜ್ಞಾನ

ಯೋಗವನ್ನೊ ಕರ್ಮಯೋಗವನ್ನೊ ಅನುಸರಿಸಿಕೊಂಡು ಹೋಗಬಹುದು. ಎಲ್ಲಿಯೂ ಅನ್ಯಮಾರ್ಗ, ಅನ್ಯಮತ, ಅನ್ಯಪಂಥ, ಅನ್ಯಸಾಧನೆಯನ್ನು ನಿಜವಾದ ಹಿಂದೂ ದೂರ ಲಾರ. ಎಲ್ಲರೂ ಒಬ್ಬನೇ ಭಗವಂತನೆಡೆಗೆ ಹಲವು ದಾರಿಗಳ ಮೂಲಕ ಬರುತ್ತಿರುವರು ಎಂಬುದನ್ನು ಜ್ಞಾನಿ ಎಷ್ಟುಮಟ್ಟಿಗೆ ತಿಳಿದುಕೊಂಡಿರುವನೋ ಹಾಗೆಯೇ ಭಕ್ತನೂ ತಿಳಿದು ಕೊಂಡಿರುವನು.

೫

## ಉಪಸಂಹಾರ

ಇದುವರೆಗೆ ಹಿಂದೂಧರ್ಮದ ವಿಶಾಲಕ್ಷೇತ್ರವನ್ನು ಒಂದು ವಿಹಂಗಮ ದೃಷ್ಟಿಯಲ್ಲಿ ನೋಡಿದೆವು. ಈ ಒಂದು ಪುಸ್ತಿಕೆ ಯಲ್ಲಿ ಬೃಹತ್ ಹಿಂದೂಧರ್ಮದ ಮುಖ್ಯ ರೂಪುರೇಖೆಗಳನ್ನು ಮಾತ್ರ ಕೊಡುವುದಕ್ಕೆ ಸಾಧ್ಯ. ಹಿಂದೂಧರ್ಮದ ಮುಖ್ಯ ತತ್ತ್ವವೇ ಭಗವಂತನು ಸೃಷ್ಟಿಯಲ್ಲಿ ಅಂತರ್ಯಾಮಿಯಾಗಿರು ವನು ಮತ್ತು ಜೀವಿಯಲ್ಲಿಯೂ ಅಂತರ್ಯಾಮಿಯಾಗಿರುವನು ಎಂಬುದು. ಈ ಸೃಷ್ಟಿ ಅವನಿಂದ ಬಂದಿದೆ. ಅವನಲ್ಲಿದೆ, ಅವನಲ್ಲಿಯೇ ಐಕ್ಯವಾಗುವುದು. ಅವನು ನಮಗೆ ಕಾಣದ ಯಾವುದೋ ಲೋಕದಲ್ಲಿ ಕುಳಿತುಕೊಂಡಿಲ್ಲ. ನಮಗೆ ಕಾಣುವ ಚರಾಚರ ವಸ್ತುವಿನಲ್ಲೆಲ್ಲಾ ಆವಿತಿರುವನು. ನಾವು ಅವನನ್ನು ಕರೆಯಬೇಕು ಆಗ ಬರುವನು, ಹುಡುಕಬೇಕು ಆಗ ಸಿಕ್ಕುವನು. ಹೇಗೆ ಸೃಷ್ಟಿಯಲ್ಲೆಲ್ಲಾ ಅವನು ಓತ ಪ್ರೋತನಾಗಿರುವನೋ ಹಾಗೆ ಎಲ್ಲಾ ಜೀವಿಗಳಲ್ಲಿಯೂ, ಜೀವಿ ಬಂದಿರುವುದು ಅವನಿಂದ. ಬ್ರಹ್ಮನೆಂಬುವನು ಒಂದು

ಬೃಹದ್ ಅಗ್ನಿಕುಂಡ. ಜೀವಿಗಳೆಲ್ಲಾ ಅದರಿಂದ ಸಿಡಿದು ಬಂದ ಕಿಡಿಗಳು. ಎಲ್ಲರಲ್ಲಿಯೂ ಆ ಕಾವಿದೆ, ಆ ಕಾಂತಿ ಇದೆ. ಅದೆಂದಿಗೂ ಆರಿಹೋಗಿಲ್ಲ. ಮೇಲೆ ಬೂದಿ ಕವಿದು ಕೊಂಡಿದೆ. ಆ ಬೂದಿಯನ್ನು ಕೊಡವಬೇಕು. ಆಗ ಪ್ರತಿ ಯೊಂದು ಜೀವಿಯೂ ಧಗಧಗಿಸುತ್ತಾ ಶೋಭಿಸುವುದು. ಹಿಂದೂಧರ್ಮ ಯಾವ ಪಾಪಿಯನ್ನೂ ತಿರಸ್ಕರಿಸುವುದಿಲ್ಲ. ಪಾಪ ಎನ್ನುವುದು ಅಜ್ಞಾನ ಜನ್ಯ. ಜ್ಞಾನದಿಂದ ಅಜ್ಞಾನ ಹೋಗುವುದು. ಪಾಪ ಒಂದು ತಾತ್ಕಾಲಿಕ ಅವಸ್ಥೆ. ನಮ್ಮ ನೈಜಸ್ಥಿತಿಯನ್ನು ಮರೆಮಾಡುವುದು, ಸೂರ್ಯನನ್ನು ಒಂದು ಮಾರುದ್ದ ಮೋಡ ಕಾಣದಂತೆ ಮಾಡುವಂತೆ. ಆದರೆ ಸಾಧನೆಯ ಬಿರುಗಾಳಿ ಬೀಸಿದರೆ ಮೋಡಗಳು ಚೆದರಿ ಹೋಗು ವುವು. ಹಿಂದೂಧರ್ಮದಲ್ಲಿ ಯಾವ ಸಂಪ್ರದಾಯಕ್ಕೆ ಒಬ್ಬ ಸೇರಿರಲಿ, ಅವನು ಅದ್ವೈತಿಯಾಗಿರಲಿ, ದ್ವೈತಿಯಾಗಿರಲಿ, ವಿಶಿಷ್ಟಾದ್ವೈತಿಯಾಗಿರಲಿ ಎಲ್ಲರೂ ಆತ್ಮ, ಅನಾದಿ, ಅನಂತ, ಅವನು ಮಂಗಳಮಯ, ಅವನಲ್ಲಿ ಜ್ಞಾನಶಕ್ತಿಗಳೆಲ್ಲಾ ಆಗಲೇ ಅಂತರ್ಗತವಾಗಿವೆ; ನಾವೀಗ ಅದನ್ನು ಮರೆತಿರುವೆವು; ಅದನ್ನು ಜ್ಞಾಪಿಸಿಕೊಳ್ಳಬೇಕಾಗಿದೆ ಎಂದು ಒಪ್ಪಿಕೊಳ್ಳುವರು.

ಮಾನವ ಜೀವಿಯನ್ನು ನಮ್ಮ ತತ್ತ್ವಶಾಸ್ತ್ರ ಗೌರವಿಸು ವಷ್ಟು ಮತ್ತಾವುದೂ ಗೌರವಿಸುವುದಿಲ್ಲ. ಉಪನಿಷತ್ತಿನಲ್ಲಿ "ಶೃಣ್ವಂತು ಸರ್ವೇ ಅಮೃತಸ್ಯ ಪುತ್ರಾಃ" ಎಂದು ನಮ್ಮನ್ನು ಸಂಬೋಧಿಸುವರು. ನಾವು ಪಾಪಿಗಳಲ್ಲ, ಕೆಲಸಕ್ಕೆ ಬಾರ ದವರಲ್ಲ. ಇತರರನ್ನು ಅಯೋಗ್ಯರೆಂದಾಗ, ನಮ್ಮನ್ನು ಅಯೋಗ್ಯರು ಎಂದು ಹೇಳಿದುಕೊಂಡಾಗ ನಾವು ಈಶ್ವರನಿಂದೆ ಯನ್ನು ಮಾಡುತ್ತಿರುವೆವು. ನಾವೆಲ್ಲ ಅಮೃತಪುತ್ರರು. ತೀ

ಯದೆ ಈ ದುರವಸ್ಥೆಗೆ ಬಂದಿರುವೆವು. ಸುಪ್ತವಾದ ಭಗವತ್ ಶಕ್ತಿಯನ್ನು ನಮ್ಮಲ್ಲಿ ಮತ್ತು ಎಲ್ಲರಲ್ಲಿಯೂ ಜಾಗ್ರತಗೊಳಿಸುವುದೇ ಹಿಂದೂಧರ್ಮದ ಉದ್ದೇಶ.

ಎಲ್ಲಾ ಜೀವಿಗಳು, ಮಾನವರಾಗಲಿ, ಮೃಗಗಳಾಗಲಿ, ತರುಲತೆಗಳಾಗಲಿ, ಜಡಸ್ಥಿತಿಯಲ್ಲಿರಲಿ, ಈ ಭೂಮಿಗೆ ದೂರವಾದ ಯಾವ ಲೋಕದಲ್ಲೇ ಇರಲಿ, ಬಂಧನದಿಂದ ಪಾರಾಗಿ ಒಂದಲ್ಲ ಒಂದು ದಿನ ಮುಕ್ತವಾಗಿಯೇ ಆಗುವುದು. ಮುಕ್ತಿ ಎಂಬುದು ಯಾವುದೋ ಕೆಲವು ಶ್ರೀಮಂತ ಜೀವಿಗಳ ವಿಲಾಸವಲ್ಲ. ಎಲ್ಲಾ ಜೀವಿಗಳ ಆಜನ್ಮ ಹಕ್ಕು. ಸೃಷ್ಟಿ ಎಂಬ ಮಹಾಯಂತ್ರವಿರುವುದು ಬದ್ಧಜೀವಿಗಳನ್ನು ಮುಕ್ತರನ್ನಾಗಿ ಮಾಡುವುದಕ್ಕೆ. ಸುಮ್ಮನೆ ಜೀವಿಗಳನ್ನು ಹಿಂಸಿಸಿ ಆನಂದಿಸುವುದಕ್ಕಲ್ಲ. ಪ್ರತಿಯೊಂದು ಜೀವಿಯಲ್ಲಿಯೂ ಪರಮಾತ್ಮನ ಅಂಶಗಳಿವೆ. ಅವು ಮಾಯಾ ಕಶ್ಮಲದೊಡನೆ ತಾತ್ಕಾಲಿಕವಾಗಿ ಬೆರೆತು ಹೋದಂತಿದೆ. ಆ ಕಶ್ಮಲವನ್ನು ಬಿಡಿಸಬೇಕಾಗಿದೆ. ಅದಕ್ಕಾಗಿಯೇ ಹಲವು ಸುತ್ತಿಗೆಯ ಪೆಟ್ಟುಗಳು, ಅದಕ್ಕಾಗಿಯೇ ಕಣ್ಣೀರಿನ ದ್ರವದಲ್ಲಿ ಸ್ನಾನ. ಕೊನೆಗೆ ಅಚ್ಚ ಅಪರಂಜಿಯ ಚಿನ್ನವಾಗುವ ತನಕ ಈ ಸೃಷ್ಟಿ ಕಾರ್ಖಾನೆಯಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ನಾವು ಸಾಗುತ್ತಿರುವೆವು. ಇದೇನು ಅಂತ್ಯವಿಲ್ಲದ ಪಯಣವಲ್ಲ. ನಾವು ದೇವರ ಸನ್ನಿಧಿಯನ್ನು ಮುಟ್ಟಿದಾಗ ಯಂತ್ರದಿಂದ ಹೊರಗೆ ಬರುವೆವು. ಹಿಂದೂಧರ್ಮ ಒಂದು ಸಮಗ್ರದೃಷ್ಟಿಯನ್ನು ನೀಡುವುದು.

ಹಿಂದೂಧರ್ಮ ಈಗ ನಮಗೆ ತಿಳಿದ ಧರ್ಮಗಳೆಲ್ಲಕ್ಕಿಂತಲೂ ಪುರಾತನವಾದುದು. ವೇದಗಳ ಕಾಲವನ್ನು ಯಾರೂ ಇನ್ನೂ ಸುನಿಶ್ಚಯಮಾಡಿಲ್ಲ. ಎಷ್ಟೇ ಕನಿಷ್ಠಪಕ್ಷವಾದರೂ ಎಂಟು

ಹತ್ತು ಸಾವಿರ ವರ್ಷಗಳಾದರೂ ಆಗಿರಬೇಕು. ಈ ಧರ್ಮ ದೊಂದಿಗೆ ಹೋಲಿಸಿನೋಡಿದರೆ ಕ್ರೈಸ್ತ, ಮಹಮ್ಮದೀಯ, ಬೌದ್ಧಧರ್ಮಗಳು ನೆನ್ನೆ ಮೊನ್ನೆ ಕಣ್ಣುತೆರೆದ ಹಸುಳೆಗಳಂತೆ ಇರುವುವು. ಆದರೆ ಈ ಧರ್ಮ ಸಹಿಸಿದಷ್ಟು ಕಷ್ಟ ಆಘಾತ ಗಳು ಉಳಿದ ಧರ್ಮಗಳ ಪಾಲಿಗೆ ಬರಲಿಲ್ಲವೆಂತಲೇ ಹೇಳ ಬೇಕು. ಎಷ್ಟುವೇಳೆ ಭರತಖಂಡದ ಹೊರಗಿನಿಂದ ಅನ್ಯ ಧರ್ಮಾವಲಂಬಿಗಳು ಹಿಂದೂಧರ್ಮವನ್ನು ನಾಶಮಾಡಲು ಬಂದರು. ಭರತಖಂಡದಲ್ಲೇ ನೆಲಸಿದರು. ಕತ್ತಿಕೋವಿ ಯನ್ನೆಲ್ಲಾ ಉಪಯೋಗಿಸಿದರು. ಶಾಸ್ತ್ರಗಳನ್ನು ಸುಟ್ಟರು, ಗುಡಿಗೋಪುರಗಳನ್ನು ನೆಲಸಮಮಾಡಿದರು. ಆದರೇನು ವಜ್ರ ಸಮನಾದ ಸನಾತನ ತತ್ತ್ವದ ತಳಹದಿಯ ಮೇಲೆ ಮಂಡಿಸಿದ ಧರ್ಮ ಎಲ್ಲವನ್ನೂ ಎದುರಿಸಿ ಹಿಂದಿಗಿಂತಲೂ ಶ್ರೀಯುತ್ತ ವಾಗಿದೆ. ನಿಜ, ಏಳು ಬೀಳುಗಳು ಈ ಧರ್ಮದ ಪಾಲಿಗೆ ಬಂದಿವೆ. ಧರ್ಮದ ಹೆಸರಿನಲ್ಲಿ ಅಧರ್ಮದ ಕಳೆ ಬೆಳೆದು ಕೊಂಡಿದೆ. ಆದರೆ ಸೃಷ್ಟಿಯಲ್ಲಿ ಯಾವುದಕ್ಕೆ ಇದು ತಪ್ಪಿದೆ ? ಎಂದು ಧರ್ಮಗ್ಲಾನಿಯಾಗುವುದೋ ಆಗ ಮಹಾತ್ಮರು ಉದ್ಭವಿ ಸುವರು. ಹಿಂದೂಧರ್ಮದ ಈ ಮಲಿನತೆಯನ್ನೆಲ್ಲಾ ತೊಳೆದು ಹಿಂದಿನಂತೆ ನಿರ್ಮಲವಾಗಿಡಲು ಯತ್ನಿಸಿರುವರು. ಮತ್ತೊಂದು ವಿಶೇಷವೇನೆಂದರೆ ಅಧರ್ಮ ಯಾವಾಗ ಹೆಚ್ಚುವುದೋ ಆಗ ಧರ್ಮೋದ್ಧಾರಕ್ಕೆ ಭಗವಂತನು ತಾನೇ ಅವತಾರವೆತ್ತಿ ಬರು ತ್ತಾನೆ ಎಂದು ಹಿಂದುಗಳು ನಂಬುವರು. ಇತರ ಧರ್ಮಗಳಲ್ಲಿ ದೇವರು ಪ್ರವಾದಿಗಳನ್ನು ಕಳುಹಿಸುತ್ತಾನೆ. ಹೆಚ್ಚು ಎಂದರೆ ತನ್ನ ಅಂಶವಾದ ಮಗನನ್ನು ಕಳುಹಿಸುತ್ತಾನೆ ಎಂದು ನಂಬುವರು. ಹಿಂದೂಗಳಾದರೋ ಅದು ಮಾತ್ರವಲ್ಲ, ಕೆಲವು ವೇಳೆ ಅವನೇ

ಅವತರಿಸುವನು, ಎಂದರೆ ಕೆಳಗೆ ಇಳಿದು ಬರುವನು ಎಂದು ನಂಬುವರು. ಅವನು ಪ್ರಪಂಚಕ್ಕೆ ಬಂದು ದಾರಿ ತೋರದೆ ಇದ್ದರೆ ಇನ್ನಾರಿಗೆ ಸಾಧ್ಯ! ಕೆಲವು ವಿಚಾರಮತಿಗಳು ಸರ್ವಾಂತರ್ಯಾಮಿಯಾದ ದೇವರು ಒಂದು ಮಿತದಿಂದ ಕೂಡಿರುವ ಮಾನವಾಕೃತಿಯಲ್ಲಿ ಬರುವುದಾದರೂ ಹೇಗೆ ಸಾಧ್ಯ, ಎಂದು ನಂಬದೆ ಇರಬಹುದು. ದೇವರು ಸರ್ವಶಕ್ತ ನಾದರೆ ಮನುಜಾಕಾರದಲ್ಲಿ ಏಕೆ ಬರಲಾರ? ಅವನು ಒಂದು ದೇಹವನ್ನು ಧರಿಸಿ ಅದರಲ್ಲಿದ್ದರೆ ಅವನು ಎಲ್ಲೆಲ್ಲಿಯೂ ಇರು ವುದಕ್ಕೆ ಏಕೆ ಚ್ಯುತಿ ಬರಬೇಕು? ಅವನು ದೇಹದಲ್ಲಿದ್ದ ಮಾತ್ರಕ್ಕೆ ತನ್ನ ಸರ್ವಾಂತರ್ಯಾಮಿತ್ವವನ್ನು ಕಳೆದುಕೊಳ್ಳು ವುದಿಲ್ಲ.

ಎಲ್ಲರೂ ಅವತಾರವನ್ನು ನಂಬಬೇಕೆಂದೂ, ಯಾರು ಹಾಗೆ ನಂಬುವುದಿಲ್ಲವೋ ಅವರು ನರಕಕ್ಕೆ ಹೋಗುತ್ತಾರೆಂತಲೂ ಹಿಂದೂಧರ್ಮ ಹೇಳುವುದಿಲ್ಲ. ಅಂತಹ ಮಹತ್‌ವ್ಯಕ್ತಿಯನ್ನು ಇಳಿದುಬಂದ ದೇವರು ಎಂದು ಭಕ್ತರು ನಂಬಬಹುದು. ಜ್ಞಾನಿ ಗಳು ಜೀವಿಯೇ ತನ್ನ ಸಾಧನಾಬಲದ ಮೇಲೆ ಹತ್ತಿ ಅಷ್ಟು ಎತ್ತರಕ್ಕೆ ಹೋಗಿರುವನು ಎಂದು ಭಾವಿಸಬಹುದು. ಹಿಂದೂ ಧರ್ಮದಲ್ಲಿ ಇಬ್ಬರಿಗೂ ಸ್ಥಳವಿದೆ. ಅಥವಾ ಇನ್ನಾವುದಾದರೂ ಭಿನ್ನಾಭಿಪ್ರಾಯಗಳನ್ನಿಟ್ಟುಕೊಂಡಿದ್ದರೂ ಅವರನ್ನೂ ಸಹಿಸ ಬಲ್ಲದು. ಅವರಿಗೂ ಒಂದು ಗೌರವಸ್ಥಾನವನ್ನು ಕೊಡ ಬಲ್ಲದು. ಆಗಸ ಎಷ್ಟು ವಿಶಾಲವಾಗಿದೆಯೋ ಅಷ್ಟು ವಿಶಾಲ ಹಿಂದೂಧರ್ಮ, ಸಾಗರ ಎಷ್ಟು ಆಳವೋ ಅಷ್ಟು ಆಳ ಹಿಂದೂ ಧರ್ಮ. ತನ್ನ ಧರ್ಮದಲ್ಲಿ ಯಾರು ಇರುವರೋ ಅವರನ್ನೆಲ್ಲಾ ಮೆಟ್ಟಿಲು ಮೆಟ್ಟಿಲಾಗಿ ಕೆಳಗಿನಿಂದ ಮೇಲಕ್ಕೆ ಅವರವರ ಶಕ್ತಿಗೆ

ತಕ್ಕಂತಹ ಸಾಧನೆಯಲ್ಲಿ ಕರೆದುಕೊಂಡು ಹೋಗಿ ಒಂದೇ ಗುರಿ ಎಡೆಗೆ ಒಯ್ಯುವುದು. ಹಾಗೆಯೇ ಅನ್ಯಧರ್ಮಗಳು ಕೂಡ ಒಂದೇ ಗುರಿ ಎಡೆಗೆ ಇರುವ ದಾರಿಗಳು. ಸತ್ಯದೇಗುಲಕ್ಕೆ ದಾರಿಗಳು ಅನಂತ. ಯಾರೂ ತಮ್ಮ ದಾರಿಯನ್ನು ಬದಲಾಯಿಸಬೇಕಾಗಿಲ್ಲ. ಯಾರು ಯಾವ ಧರ್ಮದಲ್ಲಿ ಹುಟ್ಟಿ ಬೆಳೆದಿರುವರೋ ಆಯಾ ಧರ್ಮದ ಮೂಲಕ ಮುಂದೆ ಸಾಗುತ್ತಾ ಬಂದರೆ ಎಲ್ಲರೂ ಒಂದೇ ಕೇಂದ್ರದಲ್ಲಿ ಸಂಧಿಸುವ ಸಮಯ ಬಂದೇ ಬರುವುದು ಎಂದು ಹಿಂದೂಧರ್ಮ ಸಾರುವುದು.

ಇಂತಹ ಭಾವನೆಯನ್ನು ಕೊಡುವ ಒಂದು ಶ್ಲೋಕವನ್ನು ಉದಾಹರಿಸಿ ನಮ್ಮ ಪುಟ್ಟ ಪುಸ್ತಿಕೆಯ ಕಾಣಿಕೆಯನ್ನು ಆ ಸನಾತನಧರ್ಮದ ಅಡಿದಾವರೆಗೆ ಸಮರ್ಪಿಸುವೆನು.

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನಃ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ
ಅರ್ಹನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋऽಯಂ ವೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ

ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮನೆಂದೂ, ಬೌದ್ಧರು ಬುದ್ಧನೆಂದೂ, ವಿಚಾರಪಟುಗಳಾದ ನೈಯಾಯಿಕರು ಕರ್ತನೆಂದೂ, ಜೈನಶಾಸನಗಳನ್ನು ಅನುಸರಿಸುವವರು ಅರ್ಹತ್ ಎಂದೂ, ಮೀಮಾಂಸಕರು ಕರ್ಮವೆಂದೂ ಯಾರನ್ನು ಉಪಾಸಿಸುವರೋ ಅಂತಹ ತ್ರೈಲೋಕ್ಯನಾಥನಾದ ಹರಿ ನಮ್ಮ ವಾಂಛಿತ ಫಲಗಳನ್ನು ನೀಡಲಿ.

WO 193—NUPM—3000 copies—9-11-1959

೨
೨೯
೩೦.
೩೧. ಇಂಗ್ಲಿಷ್ ಪ್ರಬಂಧಗಳು—ಎಸ್. ...
೩೨. ಅಕ್ಕಮಹಾದೇವಿ—ಎಸ್. ವಿ. ಪರಮೇಶ್
೩೩. ಗಣಿತಶಾಸ್ತ್ರದ ಸ್ವರೂಪ
—ಡಾ|| ಸಿ. ಎನ್. ಶ್ರೀ
೩೪. ಋಗ್ವೇದ—ಎಂ. ಎ. ಕೃಷ್ಣಸ್ವಾಮಿ
೩೫. ಕುಮಾರವ್ಯಾಸ ವಾಣಿ—ಎಸ್. ವಿ. ರಂಗ
೩೬. ಆಳ್ವಾರುಗಳು—ಎಂ. ಯಾಮುನಾಚಾರ
೩೭. ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳೆಸಿದ
—ವಿ
೩೮. ಸುಭಾಷಿತ ಸಂಗ್ರಹಗಳು—ಎಂ. ಪಿ. ಎ
೩೯. ಮಕ್ಕಳ ಭಾವಜೀವನ—ಡಾ|| ಬಿ. ಕುಪ್ಪು
೪೦. ಸಹಕಾರ—ಎಸ್. ಗೋಪಾಲಸ್ವಾಮಿ
೪೧. ನಯಸೇನ—ಜಿ. ವೆಂಕಟಸುಬ್ಬಯ್ಯ
೪೨. ಕೌಟಲ್ಯ—ಡಾ|| ಎಂ. ವಿ. ಕೃಷ್ಣರಾವ್
೪೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟ
೪೪. ಮುನಿಸಿಪಾಲಿಟಿಗಳು—ಎಚ್. ಕೃಷ್ಣರಾ
೪೫. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೪೬. ರುಚಿ—ಎಸ್. ವಿ. ರಂಗಣ್ಣ
೪೭. ಕೀಟಗಳು—ಡಿ. ಎಸ್. ವೀರಯ್ಯ
೪೮. ಅಲೆಗಳು—ಕೆ. ಶೇಷಾದ್ರಿ ಅಯ್ಯಂಗಾರ್
೪೯. ಮುದ್ದಣ—ಟಿ. ಎಸ್. ಶಾಮರಾವ್
೫೦. ... ನಿಕರು—ಬಿ. ಎ.
೫೧.
೫

